॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

## ಯುಗಪುರುಷ

# ಮಹಾಂತ ಶಿವಯೋಗಿಗಳು

(೧೯೩೦ – ೨೦೧೮)


ಲೇಖಕರು

ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)

ಎಂ.ಎ.(ತತ್ವಜ್ಞಾನ),ಎಲ್‌ಎಲ್.ಬಿ.(ಸ್ಪೇಶಲ್),
ಎಂ.ಎ. (ಕನ್ನಡ), ಎಂ.ಎ.(ಹಿಂದಿ),
ಸಿ.ವಾಯ್.ಇಡಿ. (ಯೋಗ ಶಿಕ್ಷಣ)

ಗೌ॥ ಸಂಪಾದಕರು, 'ಬಸವಬೆಳಗು' ಪತ್ರಿಕೆ, ರಾಮದುರ್ಗ.



೨೦೧೮

ಬಸವ ಕೇಂದ್ರ

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ

ಚಿತ್ತರಗಿ ಸಂಸ್ಥಾನಮಠ,

ಇಳಕಲ್ಲ–೫೮೭ ೧೨೫. ಜಿ. ಬಾಗಲಕೋಟ

**ಯುಗಪುರುಷ ಮಹಾಂತ ಶಿವಯೋಗಿಗಳು : ಜೀವನ-ಸಾಧನೆ**

ಲೇಖಕರು : **ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**
ಎಂ.ಎ.(ತತ್ವಜ್ಞಾನ),ಎಲ್‌ಎಲ್.ಬಿ.(ಸ್ಪೇಶಲ್),
ಎಂ.ಎ. (ಕನ್ನಡ), ಎಂ.ಎ.(ಹಿಂದಿ),
ಸಿ.ವಾಯ್.ಇಡಿ. (ಯೋಗ ಶಿಕ್ಷಣ)
ಗೌ॥ ಸಂಪಾದಕರು, ಬಸವ ಬೆಳಗು ಪತ್ರಿಕೆ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ



ಪ್ರಕಾಶಕರು : **ಬಸವ ಕೇಂದ್ರ**
**ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ**
**ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ-೫೮೭ ೧೨೫. ಜಿ. ಬಾಗಲಕೋಟೆ**

ಪ್ರಥಮ ಮುದ್ರಣ : ೨೦೧೮

ಪ್ರತಿಗಳು : ೧೦೦೦

ಪುಟಗಳು : viii + ೫೬ = ೬೪

ಪೇಪರ ಬಳಸಿದ್ದು : ಮ್ಯಾಪ್ಲಿಥೋ ಮತ್ತು ಆರ್ಟ ಕಾರ್ಡ ಕವ್ಹರ ೨೫೦ ಜಿ.ಎಸ್.ಎಂ.

ಬೆಲೆ : **೫೦/- (ಐವತ್ತು ರೂಪಾಯಿಗಳು)**

ಮುಖಪುಟ ವಿನ್ಯಾಸ : ಶ್ರೀ ರವೀಂದ್ರ ವಿಶ್ವಜ್ಞ, ಧಾರವಾಡ.

ಮುದ್ರಕರು : **ಶ್ರೀ ಹುಚ್ಚೇಶ್ವರ ಆಫ್‌ಸೆಟ್ ಪ್ರಿಂಟರ್ಸ**
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ
ದೂರವಾಣಿ : ೦೮೩೩೫ - ೨೪೧೦೬೩

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

**ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು**
**ಜಗದ್ಗುರು ತೋಂಟದಾರ್ಯ ಮಹಾಸಂಸ್ಥಾನಮಠ, ಡಂಬಳ-ಗದಗ.**

## ಜಂಗಮೋಪದೇಶ ಶಸ್ತ್ರ ವೈದ್ಯ

"ಲಿಂಗಾಯತರಿಗೆ ೧೯೯೦ ನೇ ದಶಕ ಒಂದು ಸಂಕ್ರಮಣ ಕಾಲ. ೧೨ನೇ ಶತಮಾನದಲ್ಲಿ ಧರ್ಮಗುರು ಬಸವಣ್ಣನವರು ಲಿಂಗಾಯತ ಧರ್ಮ ಸ್ಥಾಪಿಸಿ, ಅನುಭವ ಮಂಟಪ ನಿರ್ಮಿಸಿ, ಶೂನ್ಯ ಪೀಠಕ್ಕೆ ಹಿಂದುಳಿದ ದಲಿತ ಜನಾಂಗದಿಂದ ಬಂದ ಅಲ್ಲಮ ಪ್ರಭುದೇವರನ್ನು ಜಂಗಮವನ್ನಾಗಿಸಿ ಜಗದ್ಗುರು ವಾಗಿಸಿದುದು ಇಡೀ ಭಾರತದ ಇತಿಹಾಸದಲ್ಲಿಯೇ ಅದ್ಭುತ ಕ್ರಾಂತಿಯಾಗಿದೆ. ಲಿಂಗವಂತ ಧರ್ಮ ಪರಂಪರೆಯು ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಹೊಲೆಯರ ಶಿವನಾಗಮಯ್ಯ ಸಮಗಾರ ಹರಳಯ್ಯ ಅಂಬಿಗರ ಚೌಡಯ್ಯ ಮಡಿವಾಳ ಮಾಚಯ್ಯ ಮುಂತಾದ ಅನುಭಾವಿಗಳಿಂದ ಒಳಗೊಂಡಿದೆ.

ಈ ಶರಣ ಪರಂಪರೆಗೆ ಇಂದು ಹೊಸ ಆಯಾಮ ನೀಡಿದವರು ಬಸವಣ್ಣನವರ ನಂತರ ದಲಿತರ ಬಗ್ಗೆ, ಹಿಂದುಳಿದವರ ಬಗ್ಗೆ ನೇರವಾಗಿ ಹೇಳಿದವರು, ಸಂಸ್ಕಾರ ನೀಡಿ ಅಪ್ಪಿಕೊಂಡವರು **ಇಳಕಲ್ಲ ಮಹಾಂತ ಸ್ವಾಮಿಗಳೊಬ್ಬರೇ.**

**ನಿಜವಾದ ವಿರಕ್ತರೆಂದರೆ ರಕ್ತ ಸಂಬಂಧ ಹರಿದೊಗೆದವರು ಮಾತ್ರ. ಅವರೇ ಖರೇ ವಿರಕ್ತರು.** ಇಂದು ನಮ್ಮ ಸಮಕಾಲೀನ ಬದುಕಿನಲ್ಲಿ ನಿಜವಾದ ವಿರಕ್ತ ಇಳಕಲ್ಲ ಸ್ವಾಮಿಗಳು ಮಾತ್ರ. ಚಿತ್ತರಗಿಯ ಮಹಾತಪಸ್ವಿ ಲಿಂ. ಶ್ರೀ ವಿಜಯ ಮಹಾಂತ ಸ್ವಾಮಿಗಳ ನಿಜವಾದ ವಾರಸುದಾರರು ಮಹಾಂತಸ್ವಾಮಿಗಳು. ಲಿಂ. **ವಿಜಯ ಮಹಾಂತ ಶಿವಯೋಗಿಗಳ ಚಿಜ್ಯೋತಿಯು ಮಹಾಂತ ಸ್ವಾಮಿಗಳಲ್ಲಿ ಬಸವ ಜ್ಯೋತಿಯಾಗಿ ಜಾಜ್ವಲ್ಯಮಾನವಾಗಿ ಬೆಳಗುತ್ತಿದೆ.**

**ಚಿತ್ತರಗಿ ಪೀಠದ ಕೀರ್ತಿಯನ್ನು ಕಡಲಾಚೆಗೂ ಬೆಳಗಿದ ಮಹಾಪುರುಷ ಈ ಮಹಾಂತ ಸ್ವಾಮಿಗಳು.** ಚಿತ್ತರಗಿ ಪೀಠದ ಸರ್ವ ಸದ್ಭಕ್ತರು ಮಹಾಂತಸ್ವಾಮಿಗಳ ಬಗ್ಗೆ ಅಭಿಮಾನ, ಹೆಮ್ಮೆ ಪಡಬೇಕು. ಬಸವತತ್ವ ವಿರೋಧಿಗಳು ವಿಷಜಂತುಗಳಂತೆ, ಪಾಪಾಸು ಕಳ್ಳಿಯಂತೆ ಬೆಳೆಯುತ್ತಿದ್ದಾರೆ. ಇದನ್ನು ಕಿತ್ತಿ ಒಗೆಯಬೇಕು. **ಬಸವತತ್ವ ಉಳಿಸಿ ಬೆಳೆಸಿ ಆಚರಿಸುವವರೇ ನಿಜವಾದ ಜಂಗಮರು, ಅಯ್ಯನವರು.** ಇಳಕಲ್ಲ ಮಹಾಂತಸ್ವಾಮಿಗಳ ಜಂಗಮ ಕಾರ್ಯಕ್ಕೆ ನಮ್ಮ ಸಂಪೂರ್ಣ ಒಪ್ಪಿಗೆ ಇತ್ತು, ಬೆಂಬಲ ಇತ್ತು, ಅವರೊಂದಿಗೆ ನಾವಿದ್ದೆವು.

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

## ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
## ಡಾ. ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
## ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ.

## "ಇಲಕಲ್ಲ ಮಹಾಂತ ಸ್ವಾಮಿಗಳು ಬಸವತತ್ವ ಉಸಿರಾಗಿಸಿಕೊಂಡವರು"

"ಚಿತ್ತರಗಿ ಪೀಠ ಇಳಕಲ್ಲಿನ ಜನತೆ ನನ್ನ ತಂದೆ-ತಾಯಿ. ಈ ಪುಣ್ಯ ಭೂಮಿಯ ಋಣ ತೀರಿಸಲು ಹತ್ತಾರು ಸಲ ಹುಟ್ಟಿ ಬರಬೇಕಾಗಿದೆ. ಇಳಕಲ್ಲ ಶ್ರೀಗಳವರು ಬಸವತತ್ವ ಉಸಿರಾಗಿಸಿಕೊಂಡವರು. ಮಹಾಂತ ಜೋಳಿಗೆಯ ಮೂಲಕ ನಾಡಿನಲ್ಲಿ ಬಸವಧರ್ಮ ಬೆಳಗುತ್ತಿದ್ದಾರೆ. ಅವರ ಮಹಾಂತ ಜೋಳಿಗೆ ಯಲ್ಲಿ ಹಳೆಯದನ್ನೆಲ್ಲಾ ಈ ಜಂಗಮೋತ್ಸವದಲ್ಲಿ ಹಾಕಿದ್ದೇನೆ. ಬಸವಣ್ಣನವರು ಅಂದಿಗೂ-ಇಂದಿಗೂ-ಎಂದೆಂದಿಗೂ ಗುರುವಾಗಿದ್ದಾರೆ. ಮುಂದಿನ ದಿನಗಳಲ್ಲಿ ಸಮಾಜ ಸೇವೆಗಾಗಿ ಶ್ರಮಿಸುತ್ತೇನೆ. ಇಳಕಲ್ಲ ಶ್ರೀಗಳು 'ಶರಣ ಸಂಗಮ' ಅಂಗವಾಗಿ ಉಣಬಡಿಸಿದ ಬಸವತತ್ವ ಶ್ರೀರಕ್ಷೆಯಾಗಿರಲಿ." -ಶ್ರೀಮೂಜಗಂ

ಕೃಪೆ : ಸುದ್ದಿಮೂಲ ಪತ್ರಿಕೆ ರಾಯಚೂರ ವರದಿ (೨೩-೫-೧೯೯೯)

## ಬಸವತತ್ವದ ವಿಜಯಧ್ವಜ

ಶ್ರೀಮನಿಪ್ರ ಮಹಾಂತ ಸ್ವಾಮಿಗಳವರು ತಮ್ಮ ಪೀಠಕ್ಕೆ ಒಬ್ಬ ಅರ್ಹ ಯೋಗ್ಯ ಸುಸಂಸ್ಕೃತ ಬಸವತತ್ವ ನಿಷ್ಠ ದಲಿತನನ್ನು ಉತ್ತರಾಧಿಕಾರಿಯಾಗಿ ಮಾಡುವುದಾಗಿ ಅಪ್ಪಣೆ ಕೊಡಿಸಿದರೆಂಬುದನ್ನು ಕೇಳಿ, ಪರಮಾನಂದಭರಿತ-ನಾಗಿದ್ದೇನೆ.

ಇದು ಬಸವತತ್ವದ ವಿಜಯಧ್ವಜವೆಂದೇ ಹೇಳಬೇಕು. ಇದನ್ನು ಎಲ್ಲರೂ ಸ್ವಾಗತಿಸಬೇಕು. ಯಾರೂ ವಿರೋಧಿಸಬಾರದು. ವಿರೋಧಿಸಿದರೆ ಅವರು ಬಸವತತ್ವ ವನ್ನು ವಿರೋಧಿಸಿದಂತೆ.

-ಡಾ. ಸಿದ್ಧಯ್ಯ ಪುರಾಣಿಕ, ಬೆಂಗಳೂರು

(ಕೃಪೆ : ಉತ್ತರ ಕರ್ನಾಟಕ ಪತ್ರಿಕೆ, ಬೀದರ ೨೯-೫-೧೯೯೪)

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

**ಶಿವಾನುಭವ ಚರವರ್ಯ**
**ಶ್ರೀ ಮನಿಪ್ರ ಗುರುಮಹಾಂತ ಸ್ವಾಮಿಗಳು**
**ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಹಾಗೂ ಸಂಗನಬಸವ ಮಠ ಸವದಿ**

## ಸೊಲ್ನುಡಿ

ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ೧೯ನೇ ಪೀಠಾಧಿಪತಿಗಳು, ಸವದಿ ಸಂಗನಬಸವಮಠದ ೫ನೇ ಅಧಿಪತಿಗಳೂ, ನನ್ನ ಪೂಜ್ಯ ಹಿರಿಯ ಗುರುಗಳೂ ಆಗಿರುವ **ಶ್ರೀಮನಿಪ್ರ ಡಾ. ಮಹಾಂತ ಶಿವಯೋಗಿಗಳು ಈ ಯುಗದ ಬಸವ ಚೇತನರು**. ಮಾತೃಹೃದಯಿಗಳು. ವಿಶ್ವಗುರು ಅಪ್ಪ ಬಸವಣ್ಣನವರು ಜಗಜ್ಯೋತಿಯೆನಿಸಿದರೆ, ಪೂಜ್ಯ ಮಹಾಂತಪ್ಪಗಳವರು ಬಸವಜ್ಯೋತಿಯಾಗಿದ್ದಾರೆ.

ಸುಜ್ಞಾನ–ಸತ್ಕ್ರಿಯೆ–ಸ್ವಾನುಭಾವದ ಶರಣಜೀವಿಗಳಾಗಿರುವ ಸಿದ್ಧಣ್ಣನವರು **ಬಸವತತ್ವ ಪ್ರಸಾರ ಸಂಸ್ಥೆಯ ಸ್ಥಾಪಕ ಪ್ರಧಾನಕಾರ್ಯದರ್ಶಿಯಾಗಿ,** ಶಿವಾನುಭವ ಪತ್ರಿಕೆಯನ್ನು ಮರಳಿ ಪ್ರಾರಂಭಿಸಿ ಸಂಪಾದಕರಾಗಿ ಮಹತ್ವದ ಪಾತ್ರ ವಹಿಸಿದವರು. ನಮ್ಮ ಮಠದ ಶರಣಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾಗಿ ಕಳೆದ ೪೨ ವರುಷಗಳಿಂದ ಶಿವಾನುಭವ ಶಿಬಿರಗಳನ್ನು ಸಂಘಟಿಸುತ್ತಾ ಬಂದಿದ್ದಾರೆ.

**ಕ್ರಿ.ಶ. ೧೯೯೦ರಲ್ಲಿ** ಇಳಕಲ್ಲದ ಹಿರಿಯ ಪೂಜ್ಯರೊಂದಿಗೆ ಇಂಗ್ಲೆಂಡ ಪ್ರವಾಸ ಮಾಡಿ **'ಬಸವ ಇಂಟರನ್ಯಾಶನಲ್ ಫೌಂಡೇಶನ್ ಲಂಡನ್'**ದ ಸ್ಥಾಪಕ ಕಾರ್ಯದರ್ಶಿಯಾಗಿ ಸೇವೆಸಲ್ಲಿಸಿದ್ದಾರೆ. ಕ್ರಿ.ಶ. ೨೦೦೦ ಇಸ್ವಿಯಲ್ಲಿ ಇಂಗ್ಲೆಂಡ, ಅಮೇರಿಕಾ, ಕೆನಡಾ, ಫ್ರಾನ್ಸ್, ಜರ್ಮನ್, ಹಾಲಂಡ, ಇಟಲಿ, ವ್ಹಾಟಿಕನ್, ಸಿಂಗಾಪೂರ, ಆಸ್ಟ್ರಿಯಾ, ಅರಬ್ ಮುಂತಾದ ೧೮ ರಾಷ್ಟ್ರಗಳಲ್ಲಿ ನಮ್ಮೊಂದಿಗೆ ಬಸವತತ್ವ ಪ್ರಸಾರ ಗೈದು ಬಂದಿದ್ದಾರೆ.

ನಮ್ಮ ಇಳಕಲ್ಲ ಶ್ರೀಮಠದ ಬಸವಬೆಳಗು ಪತ್ರಿಕೆಯ ಗೌ॥ ಸಂಪಾದಕರಾಗಿ ಬಸವಾದಿ ಶರಣರ ಧರ್ಮ, ಸಾಹಿತ್ಯ, ತತ್ವಜ್ಞಾನ, ಶಿಕ್ಷಣ, ಯೋಗ ಕುರಿತು ೭೫ಕ್ಕೂ ಮಿಕ್ಕಿ ಗ್ರಂಥಗಳ ರಚನೆ, ಸಂಪಾದನೆ ಮಾಡಿದ್ದಾರೆ. ನಮ್ಮ ಶ್ರೀಮಠದ ಶರಣ ಸಿದ್ಧಾಂತ ವಿದ್ಯಾಪೀಠದ ಶಿಬಿರಗಳ, ಮಹಾಂತ ಜೋಳಿಗೆ ಕಾರ್ಯಕ್ರಮಗಳ ಸಂಚಾಲಕರಾಗಿ, ಸಂಯೋಜಕರಾಗಿ, ಬೋಧಕರಾಗಿ ಸೇವೆಸಲ್ಲಿಸುತ್ತಾ ಪೂಜ್ಯರಾದ ಲಿಂ. ಡಾ. ಮಹಾಂತ ಶಿವಯೋಗಿಗಳವರ ಕೃಪೆಗೆ ಪಾತ್ರರಾಗಿದ್ದಾರೆ.

**ಈ ಗ್ರಂಥದಲ್ಲಿ ಕಡಲನ್ನು ಕೊಡದಲ್ಲಿ ಹಿಡಿಯುವ ಸಾಹಸ ಮಾಡಿದ್ದಾರೆ.** ಅಪ್ಪ ಬಸವಣ್ಣನವರ, ಶಿವಯೋಗಿಗಳ ಕೃಪೆ ಅವರ ಮೇಲಿರಲಿ, ಶರಣು–ಶರಣಾರ್ಥಿಗಳು.

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

## ಲೇಖಕರ ನಿವೇದನೆ

ಬಸವ ಜನ್ಮಭೂಮಿಯಾಗಿರುವ ವಿಜಯಪುರ ಜಿಲ್ಲೆಯ ಸಿಂದಗಿ ತಾಲೂಕಿನ ಚಾಂದಕವಠೆ ಗ್ರಾಮದ ಲಿಂಗಾಯತ ಕೃಷಿ-ರೈತ ಕುಟುಂಬದಲ್ಲಿ ಜನಿಸಿದ ನಾನು, ಬಾಲ್ಯದಲ್ಲಿ ನಮ್ಮೂರಿಗೆ ಬರುತ್ತಿದ್ದ ಪೂಜ್ಯ ಬಂಥನಾಳ ಸಂಗನಬಸವ ಶಿವಯೋಗಿ-ಗಳ, ಶರಣ ಫ. ಗು. ಹಳಕಟ್ಟಿಯವರ ದರ್ಶನ, ಪ್ರವಚನ ಕೇಳುತ್ತಾ, ಬಸವಾದಿ ಶರಣರ ವಚನಗಳನ್ನು ಓದುತ್ತಾ ಬೆಳೆದೆ. ಹೈಸ್ಕೂಲ ಶಿಕ್ಷಣಕ್ಕೆ ಸಿಂದಗಿಗೆ ಬಂದಾಗ ಸಿಂದಗಿ ಹಿರೇಮಠ, ಸಾರಂಗಮಠದ, ವಿರಕ್ತಮಠದ ಪೂಜ್ಯರ ಅನುಭಾವ ಆಲಿಸುತ್ತಾ ಆಗಾಗ ಸಿಂದಗಿಗೆ ಆಗಿಮಿಸುತ್ತಿದ್ದ ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳ, ಪೂಜ್ಯ ಲಿಂಗಾನಂದ ಸ್ವಾಮಿಗಳ ಪ್ರವಚನ ಕೇಳಿ ಬಸವತತ್ವ ನಿಷ್ಠೆ ಗಟ್ಟಿಗೊಂಡಿತು. ಕಾಲೇಜು ಶಿಕ್ಷಣಕ್ಕೆ ವಿಜಯಪುರಕ್ಕೆ ಆಗಮಿಸಿದಾಗ, ವಿಜಯಪುರದ ಜ್ಞಾನಯೋಗಾಶ್ರಮದ ಪೂಜ್ಯ ಮಲ್ಲಿಕಾರ್ಜುನ ಸ್ವಾಮಿಗಳ, ಪೂಜ್ಯ ಸಿದ್ದೇಶ್ವರ ಸ್ವಾಮಿಗಳ ಸಾನಿಧ್ಯದಲ್ಲಿ ತತ್ವಜ್ಞಾನ ಪ್ರವಚನ ಕೇಳುತ್ತಾ ವಿಜ್ಞಾನ ಪದವಿಧರನಾದೆ. ಮುಂದೆ ಧಾರವಾಡಕ್ಕೆ ಬಂದಾಗ ಪೂಜ್ಯರಾದ ಸದ್ಗುರು ಲಿಂಗಾನಂದ ಸ್ವಾಮಿಗಳವರು ಹಾಗೂ ಜಗದ್ಗುರು ಮಾತೆಮಹಾದೇವಿ ಅವರ ಸಾನಿಧ್ಯದಲ್ಲಿದ್ದು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಅಧ್ಯಯನ ಮಾಡಿ ಎಂ.ಎ. ಪದವಿಗಳನ್ನು ತತ್ವಜ್ಞಾನ, ಹಿಂದಿ, ಕನ್ನಡಗಳಲ್ಲಿ, ಎಲ್‌ಎಲ್. ಬಿ. ಕಾನೂನು ಪದವಿ, ಯೋಗ ಶಿಕ್ಷಣ ತರಬೇತಿ ಪಡೆದು, ಕಾಲೇಜು ಪ್ರಾಧ್ಯಾಪಕನಾಗಿ ಧಾರವಾಡ, ಗದಗ, ರಾಮದುರ್ಗಗಳಲ್ಲಿ ಸೇವೆ ಸಲ್ಲಿಸಿದೆ.

ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ತತ್ವಜ್ಞಾನ ಅಧ್ಯಾಪಕನಾಗಿದ್ದಾಗ, ೧೯೭೭ ರಲ್ಲಿ ಬಸವತತ್ವ ಪ್ರಾಸಾರ ಸಂಸ್ಥೆ ಸ್ಥಾಪನೆ ಮಾಡಿದ ನಂತರ, ಕೂಡಲ ಸಂಗಮದಲ್ಲಿ ಸಂಸ್ಥೆಯ ಶಾಖೆ ಉದ್ಘಾಟಿಸಿ ೧೫ ದಿನ ಬಸವತತ್ವಜ್ಞಾನ ಪ್ರವಚನ ಮಾಡಿದೆ. ಮುಕ್ತಾಯ ಸಮಾರಂಭಕ್ಕೆ ಚಿತ್ತರಗಿ ಪೀಠದ ಇಳಕಲ್ಲ ಮಹಾಂತಪ್ಪಗಳು ಆಗಮಿಸಿದ್ದರು. ಅಂದು ಐಕ್ಯಮಂಟಪದಲ್ಲಿ 'ಲಿಂಗಪೂಜೆ'ಯಲ್ಲಿ ತನ್ಮಯನಾಗಿದ್ದು, ಪೂಜೆ ಮುಗಿದು ಕಣ್ತೆರೆದು ನೋಡಿದಾಗ ಬಸವಣ್ಣನವರ ಸ್ವರೂಪವೇ 'ಇಳಕಲ್ಲ ಮಹಾಂತ ರೂಪದಲ್ಲಿ' ಬೆಳಕಾಗಿ ಬಂದ ಅನುಭವವಾಯಿತು. ಸದುವಿನಯದ ಬಾಗಿದ ತಲೆ ಮುಗಿದ ಕೈಯಾದ ಪೂಜ್ಯರು ಬಸವ ಜ್ಯೋತಿಯಾಗಿ ಕಂಡರು. ಚಿತ್ತರಗಿ, ಇಳಕಲ್ಲ, ಹುನಗುಂದ, ಬಾದವಾಡಗಿ, ಮುದಗಲ್ಲ, ಕರಡಕಲ್ಲ, ಲಿಂಗಸಗೂರ, ಸೂಳೇಭಾವಿ ಮುಂತಾದ ಎಲ್ಲ ಮಠಗಳ ಶಿವಾನುಭವಕ್ಕೆ ಕರೆಸಿದರು.

ಶರಣ ಸಿದ್ಧಾಂತ ವಿದ್ಯಾಪೀಠದ ಶಿಬಿರಗಳಲ್ಲಿ ಸೇವೆ ಸಲ್ಲಿಸುವ ಭಾಗ್ಯ ದೊರೆಯಿತು. ಪೂಜ್ಯರೊಂದಿಗೆ ಕರ್ನಾಟಕ, ಆಂಧ್ರ, ಕೇರಳ, ಮಹಾರಾಷ್ಟ್ರ, ತಮಿಳುನಾಡು, ಉತ್ತರ ಭಾರತ, ದಿಲ್ಲಿ ಹಾಗೂ ಪಾಶ್ಚಿಮಾತ್ಯದ ಯುರೋಪ ರಾಷ್ಟ್ರಗಳಿಗೆ ಹೋಗಿ ಬಸವ ಸಂದೇಶ ಸಾರುವ ಭಾಗ್ಯವೂ ಲಭಿಸಿತು. ಈ ೪೨ ವರುಷಗಳ ಬಸವತತ್ವ ಪ್ರಸಾರದ ಮಹಾಮಣಿಹದಲ್ಲಿ ಬಸವಕಿಂಕರನಾಗಿ, ಬಸವತತ್ವ ಹೊತ್ತವರ ತೊತ್ತಾಗಿ ದುಡಿವ ಭಾಗ್ಯ ದೊರೆತದ್ದು ನನ್ನ ಪುಣ್ಯವೇ ಸರಿ.

ಪೂಜ್ಯರು ದಿನಾಂಕ ೧೯-೦೫-೨೦೧೮ ರಂದು ಬಸವ ಮಹಾ-ಬಯಲಿನಲ್ಲಿ ಬಯಲಾದ ನಂತರ, ದಿನಾಂಕ ೨೧-೦೫-೨೦೧೮ ರಂದು ಪೂಜ್ಯರ ಕ್ರಿಯಾಸಮಾಧಿ ನೆರವೇರಿಸಿ ಸಂಜೆ ಶ್ರೀಮಠಕ್ಕೆ ಬಂದೆವು. ಮರುದಿನ ಬೆಳಿಗ್ಗೆ ದಿನಾಂಕ ೨೨-೦೫-೨೦೧೮ ರಂದು ಮುಂಡರಗಿ ತೋಂಟದಾರ್ಯ ಸಂಸ್ಥಾನ ಮಠದ ಪೂಜ್ಯ ಶ್ರೀ ಮನಿಪ್ರ ನಿಜಗುಣಾನಂದ ಪ್ರಭು ಸ್ವಾಮಿಗಳವರ ಜಂಗಮ ಪಾದಪೂಜೆ-ಪಾದೋದಕ ಪ್ರಸಾದವಾದ ನಂತರ, ಯುಗಪುರುಷ ಮಹಾಂತ ಶಿವಯೋಗಿಗಳವರ ಸಂಕ್ಷಿಪ್ತ ಜೀವನ ಚರಿತ್ರೆ ಬರೆಯಲು ಶ್ರೀಗಳು ಅಪ್ಪಣೆ ಮಾಡಿದರು. **ನೂತನ ಶ್ರೀಗಳಾದ ಪೂಜ್ಯ ಗುರುಮಹಾಂತ ಸ್ವಾಮಿಗಳು** ಒಪ್ಪಿಗೆ ನೀಡಿದರು. ಕೊಡಪಲ್ಲಿ ಕಡಲ ಹಿಡಿವ ಸಾಹಸ ನನ್ನದಾಗಿದೆ, ಎಂಬ ಪ್ರಜ್ಞೆಯೂ ನನಗಿದೆ. ಪೂಜ್ಯ ಮಹಾಂತ ಶಿವಯೋಗಿಗಳ ೮೮ ವರುಷಗಳ ಸಾಧನೆಯು ಅಪಾರವಾಗಿದೆ. **ಗದಗಿನ ಜಗದ್ಗುರುಗಳು ಹೇಳುವಂತೆ- 'ಈ ಶತಮಾನದ ಮಠಾಧೀಶರಾದ ನಮಗೆಲ್ಲ ಬಸವ ತತ್ವದ ನೇತಾರರು, ಕಮಾಂಡರ್ ನಮ್ಮ ಮಹಾಂತಪ್ಪಗಳು'** ಪೂಜ್ಯರ ಕರುಣೆ ನಿರಂತರವಾಗಿರಲಿ. ಬಸವ ಗುರುವಿನ ಸೇವೆಗೆ ಸದಾ ಆಶೀರ್ವಾದಿಸುತ್ತಿರಲಿ ಎಂದು ವಿನಮ್ರವಾಗಿ ಪ್ರಾರ್ಥಿಸುವೆ.

ಬಸವಭಕ್ತರ ಹೃದಯದಲ್ಲಿ ಬಸವಚೈತನ್ಯವಾಗಿ ಶಾಶ್ವತವಾಗಿ ನೆಲೆಸಿ ಮಾರ್ಗದರ್ಶನ, ಪ್ರೇರಣೆ ನೀಡುತ್ತಿರಲಿ ಎಂದು ಬಸವ ಗುರುವಿನಲ್ಲಿ ಪ್ರಾರ್ಥಿಸುವೆ.

ಶರಣು-ಶರಣಾರ್ಥಿಗಳು

**-ಪ್ರೊ. ಸಿದ್ಧಣ್ಣ ಲಂಗೋಟಿ** (ಚಾಂದಕವಠೆ)
ಗೌ॥ ಸಂಪಾದಕರು, ಬಸವಬೆಳಗು ಪತ್ರಿಕೆ
ರಾಮದುರ್ಗ ಜಿ॥ ಬೆಳಗಾವಿ

## ಪೂಜ್ಯ ಡಾ. ಮಹಾಂತ ಶಿವಯೋಗಿಗಳವರಿಗೆ
## ೧೯೬೭ ರಿಂದ ೨೦೧೨ರ ವರೆಗೆ ಸಂದಿರುವ ಗೌರವ ಪ್ರಶಸ್ತಿಗಳು

| | | | |
|---|---|---|---|
| ೧. | ಅಭಿನವ ಚೆನ್ನಬಸವಣ್ಣ | – ಹುಕ್ಕೇರಿಮಠ ಹಾವೇರಿ | (೧೯೬೭) |
| ೨. | ಕಾಯಕನಿಷ್ಠ ಶಿವಯೋಗಿ | – ಶ್ರೀ ಪುಟ್ಟರಾಜ ಗವಾಯಿಗಳು ಪುರಾಣ ಸಮಿತಿ ದಾವಣಗೆರೆ | (೧೯೬೮) |
| ೩. | ಪ್ರವಚನ ಪ್ರವೀಣ | – ನಾಗರಿಕರು ಬಾಗಲಕೋಟೆ | (೧೯೬೯) |
| ೪. | ಶಿವಾನುಭವ ಚರವರ್ಯ | – ಚಿತ್ತರಗಿ–ಇಳಕಲ್ಲದ ಸದ್ಭಕ್ತರು | (೧೯೯೦) |
| ೫. | ವೀರಶೈವ ತತ್ವವೇತ್ತ ಸಮಾಜ ಸಂಘಟಿಕ | – ರಾವೂರು ಸದ್ಭಕ್ತರು (ಚಿತ್ತಾಪೂರ) | (೧೯೭೧) |
| ೬. | ಮಹಾಂತ ಜೋಳಿಗೆ ಶಿವಶಿಲ್ಪಿ | – ಚಿತ್ತರಗಿ ಪೀಠದ ಸದ್ಭಕ್ತರು | (೧೯೭೬) |
| ೭. | ಲಿಂಗವಂತ ಧರ್ಮ ಪ್ರಚಾರ ಧುರೀಣ | – ಶ್ರೀ ಮುರುಘಾಮಠ ಧಾರವಾಡ | (೧೯೮೧) |
| ೮. | ಸೋಲರಿಯದ ಸಾಧಕ | – ಶ್ರೀ ವಿ.ಮ.ವಿ. ಸಂಘ ಇಲಕಲ್ಲ | (೧೯೯೧) |
| ೯. | ಅರಿವಿನ ಮೂರ್ತಿ | – ಯುಥ್ ಫೆಡರೇಶನ್ ಅಥಣಿ | (೧೯೯೨) |
| ೧೦. | ಸವದಿಯ ಸಿರಿ | – ಸವದಿ ಸದ್ಭಕ್ತರು | (೧೯೯೨) |
| ೧೧. | ಕಾಯಕಯೋಗಿ | – ಶ್ರೀ ಮುರುಘಾಮಠ, ಚಿತ್ರದುರ್ಗ | (೧೯೯೫) |
| ೧೨. | ದಲಿತೋದ್ಧಾರಕ ಮಹಾಂತ | – ಶ್ರೀ ಹಿರೇಮಠ ಸಂಸ್ಥಾನ ಭಾಲ್ಕಿ | (೧೯೯೮) |
| ೧೩. | ಸಮಾಜ ಸುಧಾರಕ | – ಶ್ರೀ ಮುರುಘಾಮಠ, ಚಿತ್ರದುರ್ಗ | (೨೦೦೧) |
| ೧೪. | ಹೇ ಅಮೃತ ನಿಧಿ | – ವಿಮೋಚನಾ ಸಂಸ್ಥೆ, ಅಥಣಿ | (೨೦೦೨) |
| ೧೫. | ಸ್ಪಂದನ ಪ್ರಶಸ್ತಿ | – ಇಂಡಿಯನ್ ಸೈಕಿಯಾಟ್ರಿಕ್ ಸೊಸೈಟಿ | (೨೦೦೩) |
| ೧೬. | ಗಣಾಚಾರ ಪ್ರಶಸ್ತಿ | – ಅಂಬಿಗ ಚೌಡಯ್ಯ ಪ್ರತಿಷ್ಠಾನ ಗದಗ–ಬೆಟಗೇರಿ | (೨೦೦೬) |
| ೧೭. | ಕನಕಶ್ರೀ ಪ್ರಶಸ್ತಿ | – ಕನಕದಾಸ ಸಾಹಿತ್ಯ–ಸಂಸ್ಕೃತಿ ವೇದಿಕೆ, ಅಥಣಿ | (೨೦೦೬) |
| ೧೮. | ನಾಡಿನ ಪುಣ್ಯದ ಶಿವಯೋಗಿ | – ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟೆ | (೨೦೦೭) |
| ೧೯. | ಗೌರವ ಡಾಕ್ಟರೇಟ್ | – ಕರ್ನಾಟಕ ವಿ.ವಿ. ಧಾರವಾಡ | (೨೦೦೯) |
| ೨೦. | ಆಧುನಿಕ ಸಮಾಜದ ಸಮಾನತೆಯ ಹರಿಕಾರ | – ನಗರ ಸಭೆ ಬೀದರ | (೨೦೦೯) |
| ೨೧. | ಸಂಯಮ ಪ್ರಶಸ್ತಿ | – ಕರ್ನಾಟಕ ರಾಜ್ಯ ಸರ್ಕಾರದ ಮದ್ಯಪಾನ ಸಂಯಮ ಮಂಡಳಿ, ಬೆಂಗಳೂರು | (೨೦೧೨) |
| ೨೨. | ರಾಷ್ಟ್ರೀಯ ಬಸವ ಪುರಸ್ಕಾರ | – ಕರ್ನಾಟಕ ಸರಕಾರ | (೨೦೧೨) |



ವಿಶ್ವಗುರು ಬಸವಣ್ಣನವರು
(೧೧೦೫ - ೧೧೬೭)



ಶಿವಯೋಗಿ
ಲಿಂ. ವಿಜಯ ಮಹಾಂತಸ್ವಾಮಿಗಳು
ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ
(೧೮೫೦-೧೯೧೧)



ಕಾಯಕಯೋಗಿ
ಲಿಂ. ಸಂಗನಬಸವಸ್ವಾಮಿಗಳು
ವಿರಕ್ತಮಠ ಸವದಿ
(೧೮೯೦-೧೯೪೧)

## ಸವದಿಯ ವಿರಕ್ತಮಠದ ಪಟ್ಟಾಭಿಷೇಕ
(೧೩-೧೨-೧೯೬೧)



ಪೂಜ್ಯ ಶ್ರೀ. ಮ.ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳು, ನವಲಗುಂದ
ಹಾಗೂ
ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತ ಮಹಾಸ್ವಾಮಿಗಳು, ಸವದಿ

## ಸವದಿ ಮಠದಲ್ಲಿ ಪ್ರಭುಲಿಂಗಲೀಲೆ ಪ್ರವಚನ (೧೯೬೮)




ಪೂಜ್ಯ ಶ್ರೀ ಮ.ನಿಪ್ರ. ಮಹಾಂತ ಸ್ವಾಮಿಗಳವರಿಂದ
ಶ್ರೀ ಹಿಪ್ಪರಗಿ ಪಟ್ಟದ್ದೇವರು, ಶ್ರೀ ಸತ್ಯಪ್ಪ ಕಡೋಲಿ, ಶ್ರೀ ಚೌಡಪ್ಪ ಹುದ್ದಾರ

---

## ಜಂಗಮ ಜ್ಯೋತಿಗಳಾದ



ಶ್ರೀ ಮನಿ.ಪ್ರ. ಮಹಾಂತ ಶಿವಯೋಗಿಗಳು (ಹಿರಿಯ ಶ್ರೀಗಳು)
ಶ್ರೀ ಮನಿ.ಪ್ರ. ಗುರುಮಹಾಂತ ಸ್ವಾಮಿಗಳು (ಕಿರಿಯ ಶ್ರೀಗಳು)

ಬಸವತತ್ವ – ಅನುಷ್ಠಾನದ ಚಿಂತನೆಯಲ್ಲಿ



ಪೂಜ್ಯ ಶ್ರೀ ಮ.ನಿ.ಪ್ರ. ಡಾ. ಮಹಾಂತ ಶಿವಯೋಗಿಗಳು
ಪೂಜ್ಯ ಶ್ರೀ ಜಗದ್ಗುರು ಡಾ. ಸಿದ್ಧಲಿಂಗ ಮಹಾಸ್ವಾಮಿಗಳು

---

ಜ್ಞಾನಯೋಗಿ – ಶಿವಯೋಗಿಗಳು ಪರಮಾನಂದದಲ್ಲಿ :



ಪೂಜ್ಯಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು, ವಿಜಾಪುರ
ಪೂಜ್ಯಶ್ರೀ ಮಹಾಂತ ಶಿವಯೋಗಿಗಳು, ಇಳಕಲ್ಲ

## ನರಗುಂದ ಡಿಗ್ರಿ ಕಾಲೇಜಿನ ಪ್ರಾರಂಭೋತ್ಸವ (೧೯೬೬)



ಡಾ. ಡಿ.ಸಿ. ಪಾವಟೆ ಉಪ ಕುಲಪತಿಗಳು ಹಾಗೂ ನವಲಗುಂದ ಗವಿಮಠದ ಪೂಜ್ಯ ಶ್ರೀ ಬಸವಲಿಂಗ ಮಹಾಸ್ವಾಮಿಗಳೊಂದಿಗೆ ಸವದಿಯ ಶ್ರೀ ಮಹಾಂತ ಸ್ವಾಮಿಗಳು (೨೦-೬-೧೯೬೬)

---

## ೬೦ ಜನ ವಿಧವೆಯರಿಗೆ- ಉಡಿತುಂಬುವ ಮೂಲಕ ಗೌರವ ಸತ್ಕಾರ



ಪೂಜ್ಯ ಡಾ. ಮಹಾಂತ ಶಿವಯೋಗಿಗಳವರು
ಹಾಗೂ ಇನ್ನಿತರ ಪೂಜ್ಯರಿಂದ



ಪೂಜ್ಯಶ್ರೀಗಳವರ ಪಟ್ಟಾಭಿಷೇಕದ ದ್ವಾದಶ ವಾರ್ಷಿಕೋತ್ಸವದ ಉದ್ಘಾಟನಾ ಸಮಾರಂಭದಲ್ಲಿ
ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು ಅಧ್ಯಕ್ಷತೆ ವಹಿಸಿರುವುದು



ಶ್ರೀಮಠದಲ್ಲಿ ಹಿರಿಯಕವಿ ಡಾ. ಜಿ.ಎಸ್. ಶಿವರುದ್ರಪ್ಪನವರನ್ನು ಸನ್ಮಾನಿಸಿ
ಬಂಗಾರದ ಉಂಗುರ ತೊಡಿಸುತ್ತಿರುವ ಪೂಜ್ಯ ಶ್ರೀಗಳವರು

## ಕಲ್ಯಾಣ ನಾಡಿನ ಶರಣ ಸಮ್ಮೇಳನ
## ಬೀದರ




ಬೀದರ ಶ್ರೀಗಳು, ಹುಲಸೂರಶ್ರೀಗಳು, ಇಳಕಲ್ಲ ಶ್ರೀಗಳು, ಭಾಲ್ಕಿಯ ಶತಾಯುಷಿ ಚೆನ್ನಬಸವಪಟ್ಟದ್ದೇವರು, ಪ್ರೊ. ಸಿದ್ದಣ್ಣ ಲಂಗೋಟಿ, ದಲಿತ ಕವಿ ಡಾ. ಸಿದ್ಧಲಿಂಗಯ್ಯನವರು ಬೆಂಗಳೂರು (ಸಮ್ಮೇಳನಾಧ್ಯಕ್ಷರು)

## ಕೂಡಲ ಸಂಗಮದ ಐತಿಹಾಸಿಕ
## ಶರಣ ಮೇಳದಲ್ಲಿ



ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು, ಪೂಜ್ಯ ಮಹಾಜಗದ್ಗುರು ಲಿಂಗಾನಂದ ಸ್ವಾಮಿಗಳು ಪೂಜ್ಯ ಗದುಗಿನ ಜಗದ್ಗುರುಗಳಾದ ಶ್ರೀ ಡಾ. ಸಿದ್ದಲಿಂಗ ಮಹಾಸ್ವಾಮಿಗಳು

## ಚಿತ್ರರಗಿ ಸಂಸ್ಥಾನ ಶಾಖಾಮಠ ಸಿದ್ಧಯ್ಯನಕೋಟೆಯ ಮಠಕ್ಕೆ ದಲಿತ ಉತ್ತರಾಧಿಕಾರಿ–ಪಟ್ಟಾಭಿಷೇಕ (೧೯೯೮)




ಶರಣ ಮಾದಾರ ಚೆನ್ನಯ್ಯ ಪರಂಪರೆಯ ಪೂಜ್ಯ ಶ್ರೀ ಬಸವಲಿಂಗದೇಶಿಕರಿಗೆ ಇಳಕಲ್ಲದ ಪೂಜ್ಯ ಶ್ರೀ ಮಹಾಂತಶಿವಯೋಗಿಗಳಿಂದ ಜಂಗಮಸ್ಥಲ ದೀಕ್ಷೆ

---

## ಬಾಗಲಕೋಟೆಯ ಕಾರಿಹಳ್ಳದ ದಾಸೋಹಮಠಕ್ಕೆ ಬೋವಿ – ವಡ್ಡರ ಜನಾಂಗದ ಶರಣಬಸವ ಅಪ್ಪಗಳ ಪಟ್ಟಾಭಿಷೇಕ



ಪೂಜ್ಯ ಶ್ರೀ ಇಳಕಲ್ಲ ಮಹಾಂತ ಶಿವಯೋಗಿಗಳಿಂದ ಶರಣಬಸಪ್ಪನವರಿಗೆ ಜಂಗಮಸ್ಥಲ ದೀಕ್ಷೆ, ಪ್ರೊ. ಸಿದ್ದಣ್ಣ ಲಂಗೋಟಿ, ಗೌ. ಸಂಪಾದಕರು ಬಸವಬೆಳಗು

## ಚಿತ್ತರಗಿ ಸಂಸ್ಥಾನಮಠದ ಶಾಖಾಮಠ ಲಿಂಗಸಗೂರ - ಭಾವಣಿ
## ಲಂಬಾಣಿ ಜನಾಂಗದ ದಲಿತ ಯುವಕ
## ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳ ಪಟ್ಟಾಧಿಕಾರ ಸಮಾರಂಭ




ಪೂಜ್ಯ ಮಹಾಂತಪ್ಪಗಳವರು, ಶ್ರೀ ಸಿದ್ಧಲಿಂಗಸ್ವಾಮಿಗಳು,
ಪಾಂಡೋಮಟ್ಟಿಯ ಶ್ರೀ ಚೆನ್ನಬಸವ ಶಿವಯೋಗಿಗಳು

---

## ಬಾಗಲಕೋಟ ವಡ್ಡರ ಬೋವಿ ಜನಾಂಗದ ಶ್ರೀ ಸಿದ್ಧರಾಮೇಶ್ವರ ಗುರುಪೀಠದ ಪಟ್ಟಾಧಿಕಾರ



ಪೂಜ್ಯ ಶ್ರೀ ಮ.ನಿಪ್ರ ಮಹಾಂತ ಶಿವಯೋಗಿಗಳವರಿಂದ ನೂತನ ಜಗದ್ಗುರುಗಳಿಗೆ
ಜಂಗಮಸ್ಥಲ-ಅನುಗ್ರಹ, ಕೂಡಲಸಂಗಮ ಜಗದ್ಗುರುಗಳಾದ
ಶ್ರೀ ಜಯಮೃತ್ಯುಂಜಯ ಸ್ವಾಮಿಗಳವರ ಸಾನಿಧ್ಯ

## ಪೂಜ್ಯ ಮಹಾಂತ ಶಿವಯೋಗಿಗಳ ಅಮೃತ ಮಹೋತ್ಸವ
## (ಜನೇವರಿ-೨೦೦೨)



ಪೂಜ್ಯ ಶ್ರೀ ಚಿತ್ರದುರ್ಗ ಮುರುಘಾಮಠದ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು ಕಲಬುರ್ಗಿ, ಸತ್ತಿ, ರಬಕವಿ, ತಿಕೋಟಾ, ಇಳಕಲ್ಲ, ಅಥಣಿ, ಶಿರೂರ ಶ್ರೀಗಳವರು

---

## ಪೂಜ್ಯ ಮಹಾಂತ ಶಿವಯೋಗಿಗಳ ಅಮೃತಮಹೋತ್ಸವ




ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ಸವದಿ-ಚಿತ್ತರಗಿ-ಇಳಕಲ್ಲ ಶ್ರೀಗಳು ನಾಗಣಸೂರ ಶ್ರೀಗಳು, ಅಥಣಿ ಶೆಟ್ಟರ ಮಠದ ಶ್ರೀಗಳು

## ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ 20ನೇ ಪೀಠಾಧಿಕಾರಿಗಳಾದ
## ಶ್ರೀ ಮ.ಮಿ.ಪ್ರ. ಗುರುಮಹಾಂತ ಸ್ವಾಮಿಗಳವರ ಪಟ್ಟಾಧಿಕಾರ ಮಹೋತ್ಸವ



ಬೆಳಗಾವಿ, ನಿಡಸೋಸಿ, ಬಾಗಲಕೋಟೆ, ಕೆ.ಆರ್.ಪೇಟೆ, ಬೆಂಗಳೂರು, ಗದಗ, ಪಾಂಟೋಮಟ್ಟಿ, ಚಿತ್ರದುರ್ಗ, ಭಾಲ್ಕಿ, ಗುಳೇದಗುಡ್ಡ, ಕಲಬುರ್ಗಿ, ವಿಜಾಪುರ, ಬಳ್ಳಾರಿ, ಬೀದರ ಶ್ರೀಗಳವರು, ಡಾ. ದೇ.ಜ.ಗೌ. ಡಾ. ಎಂ.ಎಂ.ಕಲಬುರ್ಗಿ, ಶ್ರೀ ಅರವಿಂದ ಜತ್ತಿ ಅಧ್ಯಕ್ಷರು, ಬಸವಸಮಿತಿ ಮುಂತಾದವರು

---

## ಚಿತ್ತರಗಿ ಪೀಠದ 20ನೇ ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರಿಗೆ
## 19ನೇ ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳಿಂದ ಅಧಿಕಾರ ಹಸ್ತಾಂತರ



ಗದುಗಿನ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನಿಧ್ಯ, ಚಿತ್ರದುರ್ಗ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರ ದಿವ್ಯಸಾನಿಧ್ಯದಲ್ಲಿ

## ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಪಟ್ಟಾಧಿಕಾರ ಮಹೋತ್ಸವ –೨೦೦೪



ಪೂಜ್ಯ ಶ್ರೀ ಡಾ. ಮಹಾಂತ ಶಿವಯೋಗಿಗಳವರಿಂದ 20 ನೇ ಪೀಠಾಧಿಪತಿ
ಶ್ರೀ ಗುರು ಮಹಾಂತಸ್ವಾಮಿಗಳಿಗೆ ಪ್ರತಿಜ್ಞಾವಚನ ಬೋಧನೆ

---

## ಜ್ಞಾನಯೋಗಿ ಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಂದ ಜ್ಞಾನೋಪದೇಶ



ಗದಗ, ಚಿತ್ರದುರ್ಗ, ಪಾಂಡೋಮಟ್ಟಿ, ನೀಡಸೋಸಿ, ಬೆಳಗಾವಿ, ಭಾಲ್ಕಿ
ಹುಲಸೂರ, ಬಾಗಲಕೋಟೆ, ಗುಳೇದಗುಡ್ಡ, ಇಳಕಲ್ಲ, ವಿಜಯಪುರ, ಕೆ.ಆರ್. ಪೇಟೆ ಶ್ರೀಗಳು
ಡಾ. ದೇ.ಜ.ಗೌ., ಡಾ. ಕಲಬುರ್ಗಿ, ಶ್ರೀ ಅರವಿಂದ ಜತ್ತಿ, ಶ್ರೀ ಸಿದ್ದಣ್ಣ ಲಂಗೋಟಿ

## ಗದಗ ತೋಂಟದಾರ್ಯ ಮಠದಲ್ಲಿ
## ಇಳಕಲ್ಲ ಶರಣಸಿದ್ಧಾಂತ ವಿದ್ಯಾಪೀಠದ ೩೩ನೇ ಶಿವಾನುಭವ ಶಿಬಿರ (೨೦೦೮)



ಶ್ರೀ ನೀಲಕಂಠ ಗಣಾಚಾರಿ, ಬಸವಲಿಂಗಸ್ವಾಮಿಗಳು, ಗುರುಮಹಾಂತ ಸ್ವಾಮಿಗಳು
ಮಹಾಂತ ಶಿವಯೋಗಿಗಳು ಗದಗ ಜಗದ್ಗುರುಗಳು, ಕೆಳದಿ ಪಟ್ಟದ್ದೇವರು,
ಡಾ. ಗುರುಲಿಂಗ ಕಾಪಸೆ, ಪ್ರೊ. ಸಿದ್ಧಣ್ಣ ಲಂಗೋಟಿ

---

## ಮಹಾಂತ ಜೋಳಿಗೆ ಸಂಚಾರ



ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು, ಪೂಜ್ಯ ಗುರುಮಹಾಂತ ಸ್ವಾಮಿಗಳು
ಮಹಾಂತಜೋಳಿಗೆಯ ಸಂಚಾಲಕರಾದ ಪ್ರೊ. ಸಿದ್ಧಣ್ಣ ಲಂಗೋಟಿ
ಹಾಗೂ ಭಕ್ತರು

## ನಾಡೋಜ ಡಾ. ಪಾಟೀಲ ಪುಟ್ಟಪ್ಪನವರಿಗೆ 'ಬಸವಗುರುಕಾರುಣ್ಯ ಪ್ರಶಸ್ತಿ'ಯೊಂದಿಗೆ ಒಂದು ಲಕ್ಷ ರೂಪಾಯಿಗಳ ಗೌರವಧನ ಸಮರ್ಪಣೆ (೯-೯-೨೦೧೧)



ಪೂಜ್ಯ ಶ್ರೀ ಡಾ. ಮಹಾಂತಶಿವಯೋಗಿಗಳು, ಶ್ರೀ ಗುರುಮಹಾಂತಸ್ವಾಮಿಗಳು, ಶ್ರೀಬಸವಲಿಂಗಸ್ವಾಮಿಗಳು, ಪ್ರೊ. ಸಿದ್ದಣ್ಣ ಲಂಗೋಟಿ ಹಾಗೂ ಶ್ರೀ ಶಿವಣ್ಣ ಬೆಲ್ಲದ, ಧಾರವಾಡ ಮುಂತಾದವರು

---

## ಖ್ಯಾತ ಸಂಶೋಧಕ ಡಾ. ಎಂ.ಎಂ. ಕಲಬುರ್ಗಿ ಅವರಿಗೆ 'ಬಸವಗುರು ಕಾರುಣ್ಯ ಪ್ರಶಸ್ತಿ'ಯೊಂದಿಗೆ ಒಂದು ಲಕ್ಷ ರೂಪಾಯಿಗಳ ಗೌರವಧನ ಸಮರ್ಪಣೆ (೯-೯-೨೦೧೧)



ಪೂಜ್ಯ ಶ್ರೀ ಡಾ. ಮಹಾಂತಶಿವಯೋಗಿಗಳು, ಶ್ರೀ ಗುರುಮಹಾಂತಸ್ವಾಮಿಗಳು, ಶ್ರೀ ಬಸವಲಿಂಗಸ್ವಾಮಿಗಳು ಹಾಗೂ ಕಲಬುರ್ಗಿ ಶರಣ ದಂಪತಿಗಳು

## ಶರಣದಂಪತಿಗಳಾದ ಸಿದ್ಧಣ್ಣ ಲಂಗೋಟಿ-ಕಲ್ಯಾಣಮ್ಮ ಲಂಗೋಟಿ ಅವರಿಗೆ "ಶರಣ ಅಂಬಿಗ ಚೌಡಯ್ಯ-ಗಣಾಚಾರಿ ಪ್ರಶಸ್ತಿ"-೨೦೧೧




ಶ್ರೀ ಬಿರಾದಾರ, ಶ್ರೀ ಲಿಂಗಣ್ಣ ಸತ್ಯಪೇಟೆ, ಇಳಕಲ್ಲ ಶ್ರೀಗಳು, ಶ್ರೀ ಕಣವಿ
ಶ್ರೀ ಅಂಬಿಗ ಕುಮಾರ ಚೌಡಯ್ಯ ಶರಣರು ಹಾಗೂ ಅನೇಕ ಪೂಜ್ಯರು

---

## ಇಳಕಲ್ಲ ಶ್ರೀಮಠದಲ್ಲಿ ಬಸವಬೆಳಗು ಪತ್ರಿಕೆಯ ಬೆಳ್ಳಿಹಬ್ಬ ಸಂಚಿಕೆ ಬಿಡುಗಡೆ



ಪ್ರೊ. ಸಿದ್ದಣ್ಣ ಲಂಗೋಟಿ, ಶ್ರೀ ಲಿಂಗಣ್ಣ ಸತ್ಯಂಪೇಟೆ, ಶ್ರೀ ಗುರು ಮಹಾಂತಸ್ವಾಮಿಗಳು ಇಳಕಲ್ಲ
ಶ್ರೀ ರೇವಣಸಿದ್ಧಸ್ವಾಮಿಗಳು ನಾಗಣಸೂರು, ಶ್ರೀ ಬಸವಲಿಂಗಸ್ವಾಮಿಗಳು ಉಪ್ಪಲದೊಡ್ಡಿ

## ಪೂಜ್ಯ ಮಹಾಂತ ಶಿವಯೋಗಿಗಳ ಅಮೃತ ಮಹೋತ್ಸವ
## (ಜನೇವರಿ-೨೦೦೨)



ಪೂಜ್ಯ ಶ್ರೀ ಚಿತ್ರದುರ್ಗ ಮುರುಘಾಮಠದ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು
ಕಲಬುರ್ಗಿ, ಸತ್ತಿ, ರಬಕವಿ, ತಿಕೋಟಾ, ಇಳಕಲ್ಲ, ಅಥಣಿ, ಶಿರೂರ ಶ್ರೀಗಳವರು

---

## ಪೂಜ್ಯ ಮಹಾಂತ ಶಿವಯೋಗಿಗಳ ಅಮೃತಮಹೋತ್ಸವ




ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ
ಮಹಾಸ್ವಾಮಿಗಳು ಸವದಿ-ಚಿತ್ತರಗಿ-ಇಳಕಲ್ಲ ಶ್ರೀಗಳು ನಾಗಣಸೂರ ಶ್ರೀಗಳು,
ಅಥಣಿ ಶೆಟ್ಟರ ಮಠದ ಶ್ರೀಗಳು

## ಭಾರತದ ರಾಜಧಾನಿ ಹೊಸದಿಲ್ಲಿಯಲ್ಲಿ
## 2000 ಜಾಟವ ಜನಾಂಗದವರಿಗೆ ಇಷ್ಟಲಿಂಗದೀಕ್ಷೆ




ಸಾನಿಧ್ಯ - ಗದುಗಿನ ಪೂಜ್ಯ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು
ದೀಕ್ಷೆ - ಪೂಜ್ಯ ಮಹಾಂತ ಶಿವಯೋಗಿಗಳು, ಚಿತ್ತರಗಿ - ಇಳಕಲ್ಲ, ಭಾಲ್ಕಿ, ಪಟ್ಟದ್ದೇವರು
ನಂದವಾಡಗಿ ಪಟ್ಟದ್ದೇವರು, ಶಿರೂರಿನ ಡಾ. ಬಸವಲಿಂಗ ಸ್ವಾಮಿಗಳು

## ಹೊಸದಿಲ್ಲಿಯಲ್ಲಿ ಬಸವಾನುಭವ ಗೋಷ್ಠಿ



ಇಳಕಲ್ಲಶ್ರೀಗಳು, ಗದಗ ಜಗದ್ಗುರುಗಳು, ಶ್ರೀ ಭೀಮಣ್ಣ ಖಂಡ್ರೆಯವರು,
ಶ್ರೀ ವಿಶ್ವನಾಥರೆಡ್ಡಿ ಮುದ್ನಾಳ, ಹೊಸದಿಲ್ಲಿಯ ಜಾಟವ ಜನಾಂಗದ ಅಧ್ಯಕ್ಷರು,
ಶ್ರೀ ಅರವಿಂದ ಜತ್ತಿ, ಡಾ. ಭಗವಾನದಾಸ ತಿವಾರಿ, ಶ್ರೀ ಎನ್. ತಿಪ್ಪಣ್ಣವನರು

## ಪೂಜ್ಯ ಶ್ರೀ ಮ.ನಿ.ಪ್ರ.ಮಹಾಂತ ಸ್ವಾಮಿಗಳವರಿಗೆ
## ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್

# ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ




# KARNATAK UNIVERSITY, DHARWAD

ಕರ್ನಾಟಕ ವಿಶ್ವವಿದ್ಯಾಲಯದ ಕುಲಾಧಿಪತಿ, ಸಹ ಕುಲಾಧಿಪತಿ, ಕುಲಪತಿ,
ಸಿಂಡಿಕೇಟ್ ಹಾಗೂ ವಿದ್ಯಾವಿಷಯಕ ಪರಿಷತ್ ಸದಸ್ಯರಾದ ನಾವು

ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತಪ್ಪಗಳವರು

ಇವರಿಗೆ

## ಡಾಕ್ಟರ್ ಆಫ್ ಲೆಟರ್ಸ್

ಗೌರವ ಪದವಿಯನ್ನು ಧಾರವಾಡದಲ್ಲಿ ಎರಡುಸಾವಿರದ ಒಂಬತ್ತನೆಯ ವರ್ಷದ
ಜನೆವರಿ ಇಪ್ಪತ್ತೊಂದರಂದು ದಯಪಾಲಿಸಲಾಗಿದೆ ಎಂದು ಈ ವಿಶ್ವವಿದ್ಯಾಲಯದ ಮುದ್ರೆ ಹಾಗೂ
ಕುಲಪತಿ ಮತ್ತು ಕುಲಾಧಿಪತಿಗಳ ರುಜುಗಳಿಂದ ಇದನ್ನು ಪ್ರಮಾಣೀಕರಿಸುತ್ತೇವೆ.

*We, the Chancellor, Pro-Chancellor, Vice-Chancellor, members of the Syndicate and Academic Council of Karnatak University certify that the Honorary Degree of*

## Doctor of Letters

*has been conferred on*

Poojya Shri Ma. Ni. Pra. MAHANTAPPAGALAVARU

*at Dharwad, on the twenty first day of January two thousand nine. In testimony whereof are set the Seal of the University and the signatures of the Vice-Chancellor and Chancellor.*

| K. Saidapur<br>ಕುಲಪತಿ Vice-Chancellor |  | Rameshwar Thakur<br>ಕುಲಾಧಿಪತಿ Chancellor |
| --- | --- | --- |

ಕರ್ನಾಟಕ ವಿಶ್ವವಿದ್ಯಾಲಯದ ಕುಲಾಧಿಪತಿಗಳಾದ
ಘನತೆವೆತ್ತ ರಾಜ್ಯಪಾಲ ಶ್ರೀರಾಮೇಶ್ವರ ಠಾಕೂರ ಅವರಿಂದ ಪ್ರದಾನ
ಮಾಡಿದ ಗೌರವ ಡಾಕ್ಟರೇಟ್ ಪದವಿ ಸರ್ಟಿಫಿಕೇಟ್

## ಪೂಜ್ಯ ಶ್ರೀ ಮ.ನಿ.ಪ್ರ.ಮಹಾಂತ ಸ್ವಾಮಿಗಳವರಿಗೆ ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್



ಕರ್ನಾಟಕ ವಿಶ್ವವಿದ್ಯಾಲಯದ ಕುಲಾಧಿಪತಿಗಳಾದ
ಘನತೆವೆತ್ತ ರಾಜ್ಯಪಾಲ ಶ್ರೀರಾಮೇಶ್ವರ ಠಾಕೂರ ಅವರಿಂದ ಪ್ರದಾನ

---

## ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳವರಿಗೆ ಶರಣ ಅಂಬಿಗರ ಚೌಡಯ್ಯ-ಗಣಾಚಾರ ಪ್ರಶಸ್ತಿ



ಗದಗ ಜಗದ್ಗುರುಗಳು, ಅಂಬಿಗರ ಕುಮಾರ ಚೌಡಯ್ಯ ಶರಣರು ಗದಗ
ಮರೆಗುದ್ದಿ - ರಬಕವಿ ಶ್ರೀಗಳು, ಚಿತ್ತರಗಿ-ಇಳಕಲ್ಲ ಹಿರಿಯ, ಕಿರಿಯ ಶ್ರೀಗಳು





'ಮಹಾಂತ ಜೋಳಿಗೆ' ಎಂಬ ಅದ್ಭುತ ಪರಿಕಲ್ಪನೆಯ ಹರಿಕಾರರೂ,
ಬಸವತತ್ವ ಪ್ರತಿಪಾದಕರೂ, ಸಮಾಜೋ-ಧಾರ್ಮಿಕ ಅನಿಷ್ಟಗಳ ಭಿಕ್ಷೆ ಬೇಡಿ
ಮನುಕುಲದ ಉದ್ಧಾರಕ್ಕಾಗಿ ಅರ್ಪಿತಗೊಂಡವರೂ ಆದ,
ಇಳಕಲ್ - ಸವದಿಯ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಮಹಾಸಂಸ್ಥಾನ ಮಠದ
ಜಂಗಮ ಜ್ಯೋತಿಗಳಾದ,
**ಪರಮಪೂಜ್ಯ ಶ್ರೀ.ಮ.ನಿ.ಪ್ರ. ಡಾ. ಮಹಾಂತ ಶಿವಯೋಗಿ** ಅವರಿಗೆ
ಕರ್ನಾಟಕ ಸರ್ಕಾರದ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯು
ಬಾಗಲಕೋಟೆಯಲ್ಲಿ 2.7.2012 ಸೋಮವಾರದಂದು
ಅಭಿಮಾನಪೂರ್ವಕ ಅರ್ಪಿಸಿದ

# ಪ್ರಶಸ್ತಿ ಪತ್ರ

ಪರಮ ಪೂಜ್ಯರೆ,

"ಬಾಪೂಜಿಯಿಂ ವಿಶ್ವಸತ್ವ ತಾನೀಗಿದಿಳೆಗೆ ಬಾನೆಮುವ ಚೇತನದಿ ರೂಪುಗೊಂಡಿಹುದೋ . . . . ."

ನೀತಿರಹಿತ ತಾಂತ್ರಿಕ ಹಿಮಪ್ರಪಾತಕ್ಕೆ ಸಿಕ್ಕು ಮುಷ್ಕುಗ್ಗಿ ಬರುತ್ತಿರುವ ಕುಸಾಂಸ್ಕೃತಿಕ ಧಾಳಿಯಿಂದ ಕಂಗೆಟ್ಟವರು ನಮ್ಮ ಜನ. ಅಯಾಚಿತವಾಗಿಯೋ, ಸ್ವ ಇಚ್ಛೆಯಿಂದಲೋ ಭವಿಷ್ಯವನ್ನು, ಬದುಕನ್ನು, ಮೌಲ್ಯಗಳನ್ನು ಮರೆತು, ವ್ಯಸನಗಳ ದಾಸ್ಯಕ್ಕೆ ಬಲಿಯಾಗಿ, ತಮ್ಮನ್ನು, ಸುತ್ತಣ ಸಮಾಜವನ್ನು ಕಲುಷಿತಗೊಳಿಸುತ್ತಿರುವುದು ಇಂದಿನ ವಾಸ್ತವ. ಈ ಜನರ ಮನ ಪರಿವರ್ತನೆ ಸುಲಭ ಸಾಧ್ಯವಲ್ಲ. ಅದಕ್ಕೆ ಬಲಿಷ್ಠ ನೈತಿಕತೆಯ ಬೆಂಬಲ ಬೇಕು. ಛಲ ಬಿಡದೆ ಸಾಧಿಸಬಲ್ಲ ದೀಕ್ಷಾಶಕ್ತಿ ಬೇಕು. ಬಾಪೂಜಿಯಿಂದ ಘುದಿಗೊಳಿಯಬಲ್ಲ ವಿಶ್ವಸತ್ವ ಬೇಕು.

ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಮಹಾಸಂಸ್ಥಾನ ಮಠವನ್ನು ಮುನ್ನಡೆಸುತ್ತಿರುವ ಶ್ರೀ ಮ.ನಿ.ಪ್ರ. ಡಾ. ಮಹಾಂತ ಶಿವಯೋಗಿಗಳಾದ, 'ಮಹಾಂತ ಜೋಳಿಗೆ' ಎನ್ನುವ ಮಹಾಸಂಸ್ಕೃತಿಯ ಹರಿಕಾರರಾದ ಪರಮಪೂಜ್ಯರೆ, ಇಂತಹ ಪೀಡಿತರ ಬದುಕು ಹಸನುಗೊಳಿಸಬೇಕು ಎಂಬ ಭಾವ ತಮ್ಮಲ್ಲಿ ಮೂಡಿದ್ದು, ಅದೂ ಧಾರ್ಮಿಕ ಸಮಾವೇಶವೊಂದರಲ್ಲಿ, ನಿಜಕ್ಕೂ ಈ ಭುವನದ ಭಾಗ್ಯವೇ ಸರಿ.

ಮೂಢನಂಬಿಕೆಗಳು, ಕಂದಾಚಾರ, ದುರ್ವ್ಯಸನ, ದುಶ್ಚಟಗಳಂತಹ ಅನಿಷ್ಟಗಳನ್ನು ಭಿಕ್ಷೆ ಬೇಡಿ ಜೋಳಿಗೆಗೆ ತುಂಬಿ, ಮನುಕುಲದ ಅಭ್ಯುದಯಕ್ಕೆ ಶ್ರಮಿಸಿದ, 'ಮಹಾಂತ ಜೋಳಿಗೆ'ಯನ್ನು ಒಂದು ಅನನ್ಯ ಸಂಕೇತವಾಗಿಸಿ ಧನ್ಯ ಶಿವಶಿಲ್ಪವಾಗಿಸಿದ ತಮ್ಮ ಅದ್ಭುತ ಎನಿಸಬಹುದಾದ ಪರಿಕಲ್ಪನೆ, ಬಸವ ತತ್ವವನ್ನು ಜೀವನ ರೀತಿಯಾಗಿಸಿದ ತಮ್ಮ ಚಿಂತನೆ ಸರ್ವಜನ ವಂದ್ಯ.

ಗೌರವಾನ್ವಿತರೆ,

'ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ' ಎಂಬ ವಚನ ದೀಕ್ಷೆಯನ್ನು ಬಾಳಬಟ್ಟೆಯಾಗಿಸಿದ ತಮ್ಮದು ಸಂತ ಬಾಳುವೆ. 'ಕುಲ, ಕುಲ ಕುಲವೆಂದು ಹೊಡೆದಾಡದಿರಿ' ಎನ್ನುವ ಸತ್ಯದೀಕ್ಷೆಯನ್ನು ತಲೆಯ ಮೇಲೆ ಹೊತ್ತ ತಮ್ಮ ನಡಿಗೆ ನಮಗೆ ಮನನೀಯ. "ಅಂದಣವನೇರಿದ ಸೊಣಗನಂತೆ, ಕಂಡರೆ ಬಿಡದು ತನ್ನ ಮುನ್ನಿನ ಸ್ವಭಾವವನು, ಸುಡು-ಸುಡು ಮನವಿದು ವಿಷಯಕ್ಕೆ ಹರಿವುದು . . ." ಎಂದು ಬಸವಣ್ಣನೆಂದ ಸತ್ಯವನ್ನು ಸಾಮಾನ್ಯ ಜನರಿಗೆ ದೃಷ್ಟಾಂತ ಸಹಿತ ಕಾಣಿಸುತ್ತಾ, ಕತ್ತಲು ತುಂಬಿದ ಅವರ ಬದುಕಿಗೆ, ಸುಜೀ ಬಾಳ್ವೆಯ ಬೆಳ್ಳರೇಕು ತೋರುತ್ತಾ ನಡೆದಿರುವ ಮಹನೀಯರೇ, ತಮ್ಮಂತಹವರ ಬದುಕಿನ ರೀತಿ ನಮಗೆ ಮಾರ್ಗದರ್ಶಿ.

ಮದ್ಯಪಾನ ಸಂಯಮ ಮಂಡಳಿಯ ವ್ಯಸನಮುಕ್ತ ಸಮಾಜ ನಿರ್ಮಾಣದ ಪ್ರಣವ ಮಂತ್ರಕ್ಕೆ ಓಂಕಾರ ದೀಕ್ಷೆಯನ್ನು ಕಟ್ಟಿಕೊಟ್ಟ ದ್ರಷ್ಟಾರರು ತಾವು. ಅದಕ್ಕಾಗಿಯೇ ತಮ್ಮ ಅಡಿದಾವರೆಗೆ 'ಸಂಯಮ 2012' ಪ್ರಶಸ್ತಿ ಸಮರ್ಪಣೆ. ತಮಗೆ ಪ್ರಶಸ್ತಿ ಸಲ್ಲುತ್ತಿದೆ ಎನ್ನುವ ಅಹಮಿಕೆಯಿಂದಲ್ಲ, ಬದಲಿಗೆ ತಾವು ಹಚ್ಚಿರುವ ಈ ಹಣತೆ ಅಗಣಿತ ಅರಿವಿನ ದೀಪಗಳಿಗೆ ಬೆಳಕುಣಿಸುವ ದಿವ್ಯಜ್ಯೋತಿಯಾಗಲಿ ಎಂಬ ವಿನಯಪೂರ್ವಕ ಅರಿಕೆಯೊಂದಿಗೆ ಈ ಪ್ರಶಸ್ತಿ ತಮಗೆ ಸಲ್ಲುತ್ತಿದೆ. ತಮಗರ್ಪಿಸಿದ ಈ ಪ್ರಶಸ್ತಿ ತನ್ನ ಮೌಲ್ಯವನ್ನು ತಾನೇ ಹೆಚ್ಚಿಸಿಕೊಂಡಿದೆ.

ದಯಮಾಡಿ ಸ್ವೀಕರಿಸಿ

# ಸಂಯಮ ಪ್ರಶಸ್ತಿ
## 2012

ಕೃಪೆಯಿರಿಸಿ ಈ ಸನ್ಮಾನ ಪತ್ರವನ್ನು ಸ್ವೀಕರಿಸಿ, ತಮ್ಮ ಶುಭಾಶೀರ್ವಾದ ಈ ನಾಡಜನತೆಯ ಮೇಲೆ ಅನವರತವಿರಲಿ,
ಕರ್ನಾಟಕ ರಾಜ್ಯವು ದುರ್ವ್ಯಸನಮುಕ್ತ ಸಂಪನ್ನ ನಾಡಾಗಿ ರೂಪಗೊಳ್ಳಲಿ ಎಂದು ಅಪೇಕ್ಷಿಸುವ,

| ಹೆಚ್.ಬಿ. ದಿನೇಶ್<br>ಕಾರ್ಯದರ್ಶಿ<br>ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ | ಸಚ್ಚಿದಾನಂದ ಹೆಗಡೆ<br>ಅಧ್ಯಕ್ಷರು,<br>ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ |
|---|---|





ಕರ್ನಾಟಕ ಸರ್ಕಾರ

# ಬಸವ ಪುರಸ್ಕಾರ – ೨೦೦೮

## ಶ್ರೀ ಮ.ನಿ.ಪ್ರ. ಡಾ.ಮಹಾಂತಪ್ಪ ಸ್ವಾಮಿಗಳು ಇಳಕಲ್

ಬಸವಾದಿ ಪ್ರಮಥರ ಆಶಯದಂತೆ ನಡೆ-ನುಡಿಗಳನ್ನು ಏಕವನ್ನಾಗಿಸಿಕೊಂಡು, ಸ್ವಸ್ಥಸಮಾಜ ನಿರ್ಮಾಣಕ್ಕೆ ನಿರಂತರ ತಮ್ಮನ್ನು ತೊಡಗಿಸಿಕೊಂಡಿರುವ ಮಹಾನ್ ಯೋಗಿಪುರುಷ ಇಳಕಲ್ಲ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠದ ಶ್ರೀ ಮಹಾಂತ ಸ್ವಾಮಿಗಳು ಜಮಖಂಡಿ ತಾಲ್ಲೂಕಿನ ಹಿಪ್ಪರಗಿ ಗ್ರಾಮದ ವಿರೂಪಾಕ್ಷಯ್ಯ-ನೀಲಮ್ಮ ಶಿವಭಕ್ತ ದಂಪತಿಗಳ ಸುಪುತ್ರರಾಗಿ ೧೯೩೦ರ ಆಗಸ್ಟ್ [illegible] ರಂದು ಮಹಾಂತಸ್ವಾಮಿಗಳು ಜನ್ಮತಾಳಿದರು. ಅವರ ಪೂರ್ವಾಶ್ರಮದ ಹೆಸರು ಮಹಾಂತಯ್ಯ. ತನ್ನ ಹತ್ತನೆಯ ವಯಸ್ಸಿನಲ್ಲಿ ಮಹಾಂತಯ್ಯ ಗುರುದೀಕ್ಷೆ ಪಡೆದು ಸವದಿಮಠದ ಉತ್ತರಾಧಿಕಾರಿಯಾಗುತ್ತಾರೆ.

ಮಹಾಂತಯ್ಯ ಅವರು ವಿದ್ಯಾಭ್ಯಾಸದ ಸಂದರ್ಭದಲ್ಲಿ ತನ್ನ ಧಾರ್ಮಿಕ ಮತ್ತು ಸಾಮಾಜಿಕ ಚಿಂತನೆಗಳನ್ನು ಉನ್ನತಮಟ್ಟದಲ್ಲಿ ವಿಸ್ತರಿಸಿಕೊಳ್ಳುತ್ತಾರೆ. ಹಾಗೂ ಇಂಗ್ಲಿಷ್, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ಅಪಾರ ಪಾಂಡಿತ್ಯ ಪಡೆದುಕೊಳ್ಳುತ್ತಾರೆ. ಮುಂದೆ ಮಹಾಂತಯ್ಯ ಮಹಾಂತ ಸ್ವಾಮಿಗಳಾಗಿ ಸವದಿಮಠದ [illegible] ಕೊಳ್ಳುತ್ತಾರೆ. ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ತಾರತಮ್ಯಗಳು, ಶೋಷಣೆಗಳು [illegible] ತಮ್ಮ [illegible]ನ್ನಾಗಿಸಿಕೊಂಡ ಸ್ವಾಮಿಗಳು, ನಿರಂತರ ಪ್ರವಾಸ ಮಾಡುತ್ತಾ ಈ [illegible] ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಈ ನಡುವೆ ಮಹಾಂತಸ್ವಾಮಿಗಳ ಕಾಯಕ ಪ್ರವೃತ್ತಿಯನ್ನು ಗಮನಿಸಿದ ಚಿತ್ತರಗಿ ಪೀಠ ತನ್ನ ಉತ್ತರಾಧಿಕಾರಿಯನ್ನಾಗಿಯೂ ಸ್ವಾಮಿಗಳನ್ನು ಆರಿಸಿಕೊಳ್ಳುತ್ತದೆ. ಅಂದು ಬಸವಣ್ಣ ನಡೆಸಿದ ಸಾಮಾಜಿಕ ಕ್ರಾಂತಿಯ ಅವಶ್ಯಕತೆ ಇಂದಿನ ಸಮಾಜಕ್ಕೂ ಇದೆಯೆಂಬ ಸತ್ಯವನ್ನರಿತ ಸ್ವಾಮಿಗಳು, ತಮ್ಮ ಕಾರ್ಯಕ್ಷೇತ್ರವನ್ನು ಮಠದ ಅಂಗಳದಿಂದ ಜನಸಮುದಾಯದ ಜೋಪಡಿಗೆ ತರುತ್ತಾರೆ. ಜೋಳಿಗೆ-ಜಂಗಮ ತತ್ವವನ್ನು ಮತ್ತೊಂದು ದಿಕ್ಕಿಗೆ ವಿಸ್ತರಿಸಿಕೊಂಡ ಸ್ವಾಮಿಗಳು, ಜೋಳಿಗೆ ಹಿಡಿದು ಜನರ ಬಳಿಗೆ ಹೋಗಿ, ನನಗೆ ನಿಮ್ಮ ಧನ-ಕನಕ, ದವಸ-ಧಾನ್ಯ ಬೇಡ, ಬದಲಾಗಿ ನಿಮ್ಮಲ್ಲಿರುವ ದುಶ್ಚಟ-ದುರ್ಗುಣಗಳನ್ನು ನನ್ನ ಜೋಳಿಗೆಗೆ ಹಾಕಿ ಎಂದು ಕೇಳುವುದರ ಮೂಲಕ ದುರ್ಗುಣ ರಹಿತ ಸಮಾಜದ ನಿರ್ಮಾಣಕ್ಕೆ ಮುಂದಾಗಿ ಯಶಸ್ವಿಯಾಗುತ್ತಾರೆ. ಶರಣ ಸಿದ್ಧಾಂತದ ಅಧ್ಯಯನವು ವ್ಯವಸ್ಥಿತವಾಗಿ ನಡೆಯಬೇಕೆಂಬ ಆಸೆಯಿಂದ 'ಶರಣ ಸಿದ್ಧಾಂತ ಪೀಠ' ಸ್ಥಾಪಿಸಿ, ಕಾಯಕ, ಇಷ್ಟಲಿಂಗ, ದಾಸೋಹ, ಜಂಗಮ ಮೊದಲಾದ ಶಿವಶರಣ ತತ್ವಗಳನ್ನು ಸಮಾಜದ ಎಲ್ಲ ವರ್ಗದ ಜನರಿಗೆ ತಲುಪಿಸುತ್ತಾರೆ. ತಮ್ಮ ಈ ಕಾರ್ಯಚಟುವಟಿಕೆಗಳನ್ನು ಇಂಗ್ಲೆಂಡ್ ತನಕ ವಿಸ್ತರಿಸಿ, ಅಲ್ಲಿನ ಭಾರತೀಯರ ಸಂಸ್ಕಾರವನ್ನು ಉನ್ನತೀಕರಿಸುತ್ತಾರೆ.

ಸಾಹಿತ್ಯ ಕ್ಷೇತ್ರಕ್ಕೂ [illegible] ಮಾಡುವ ಶ್ರೀಗಳು, ಇಲಕಲ್ಲ-ಚಿತ್ತರಗಿ ಸಂಸ್ಥಾನ ಪೀಠದಿಂದ ಹಲವು ಧಾರ್ಮಿಕ ಕೃತಿಗಳನ್ನು ಪ್ರಕಟಿಸಿರುವುದಲ್ಲದೆ, ಅಂತಹುದೇ ಪುಸ್ತಕಗಳ ಪ್ರಕಟಣೆಗೂ ನೆರವಿನ ಹಸ್ತ ನೀಡಿದ್ದಾರೆ. ಶೈಕ್ಷಣಿಕ ಕ್ಷೇತ್ರದಲ್ಲೂ ಹಲವು ಪ್ರಯೋಗಗಳು ಶ್ರೀಗಳಿಂದಾಗಿವೆ. ಸ್ವಾಮೀಜಿಗಳ ಸಮಾಜಮುಖಿ ಕಾರ್ಯಗಳನ್ನು ಗುರುತಿಸಿ ೨೦೦೦ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವು ಗೌರವ ಡಾಕ್ಟರೇಟ್ ನೀಡಿ ಗೌರವಿಸಿತು. ಕರ್ನಾಟಕ ಸರ್ಕಾರ ೨೦೦೩ರಲ್ಲಿ ಮದ್ಯಪಾನ ವಿರೋಧ ಹೋರಾಟಕ್ಕಾಗಿ ಸಂಯಮ ಪ್ರಶಸ್ತಿಯನ್ನು ನೀಡಿತು.

ಭೂಕಂಪ ಸಂತ್ರಸ್ತರಿಗೆ ನೆರವು, ನೆರೆಹಾವಳಿ ನಿರಾಶ್ರಿತರಿಗೆ ಧಾನ್ಯ ಮತ್ತು ಬಟ್ಟೆಗಳ ವಿತರಣೆ, ಬರಗಾಲ ಸಂದರ್ಭದಲ್ಲಿ ವಿವಿಧ ಸ್ಥಳಗಳಲ್ಲಿ ಗಂಜಿ ಕೇಂದ್ರಗಳ ಸ್ಥಾಪನೆ, ಮದುವೆಗಳಲ್ಲಿ ಅಕ್ಷತೆಗಾಗಿ ಅಕ್ಕಿಯನ್ನು ದುರುಪಯೋಗ ಮಾಡುವ ಬದಲು ಹೂವುಗಳನ್ನು ಬಳಸಲು ಪ್ರೇರಣೆ, ದಲಿತರು-ಹಿಂದುಳಿದವರು ಎನ್ನುವ ತಾರತಮ್ಯ ಮಾಡದೆ, ಆಸಕ್ತ ಯುವಕರಿಗೆ ಸಂಸ್ಕಾರ ನೀಡಿ ತಮ್ಮ ಮಠಗಳಿಗೆ ಸ್ವಾಮಿಗಳನ್ನಾಗಿ ಮಾಡಿಕೊಂಡದ್ದು, ನಾಗರಪಂಚಮಿಯಲ್ಲಿ ಕಲ್ಲುನಾಗರಕ್ಕೆ ಹಾಲನೆರೆದು ನಿರುಪಯುಕ್ತ ಮಾಡುವ ಬದಲು, ಅದೇ ಹಾಲನ್ನು ಬಡಮಕ್ಕಳಿಗೆ ಕುಡಿಸಲು ಕರೆ, ಕನ್ನಡ ವಚನಗಳನ್ನು ಪೂಜಾ ಕೈಂಕರ್ಯಕ್ಕೆ ಬಳಸಿಕೊಂಡದ್ದು, ದಲಿತರ ಮನೆಯಲ್ಲಿ ಶಿವಪೂಜೆ ಮಾಡಿ ದಲಿತ ಮಹಿಳೆಯರು ಸಿದ್ಧಪಡಿಸಿದ ಪ್ರಸಾದ ಸ್ವೀಕರಿಸಿದ್ದು ಮುಂತಾದ ಕ್ರಾಂತಿಕಾರಿ ಚಟುವಟಿಕೆಗಳ ಮೂಲಕ ಬಸವತತ್ವದ ಆಚರಣೆಗಾಗಿ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡು, ಸಮಾಜದಲ್ಲಿ ಕುರುಡು ಆಚರಣೆಗಳನ್ನು ದೂರಮಾಡಿ, ಶಿಕ್ಷಣ, ಧರ್ಮ, ಸಂಸ್ಕೃತಿ ಮುಂತಾದವುಗಳ ಬೆಳವಣಿಗೆಗೆ ಅತ್ಯುತ್ತಮ ಪರಿಸರವನ್ನು [illegible] ಸಮಾಜ [illegible]ಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಇಲಕಲ್ಲ ಚಿತ್ತರಗಿ ಸಂಸ್ಥಾನಮಠದ ಶ್ರೀ ಮ.ನಿ.ಪ್ರ.ಡಾ.ಮಹಾಂತ ಸ್ವಾಮಿಗಳಿಗೆ ಕರ್ನಾಟಕ ಸರ್ಕಾರವು ೨೦೦೮ನೇ ಸಾಲಿನ ಬಸವ ಪುರಸ್ಕಾರವನ್ನು ಕರ್ನಾಟಕ [illegible] ನೀಡಿ ಗೌರವಿಸಲು ಹೆಮ್ಮೆಪಡುತ್ತದೆ.

[illegible]
ಕನ್ನಡ ಮತ್ತು ಸಂಸ್ಕೃತಿ [illegible]

[illegible] ೨೦೦೯
ರವೀಂದ್ರ ಕಲಾಕ್ಷೇತ್ರ, ಬೆಂಗಳೂರು

ಕೆ.ಆರ್. ರಾಮಕೃಷ್ಣ, ಕ.ಆ.ಸೇ.
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಕರ್ನಾಟಕ ಸರಕಾರದ ಬಸವ ಪುರಸ್ಕಾರ 2008
ಶ್ರೀ ಮ.ನಿ.ಪ್ರ ಡಾ. ಮಹಾಂತಪ್ಪ ಸ್ವಾಮಿಗಳು ಇಳಕಲ್ಲ ಇವರಿಗೆ



(ದಿ. 31-7-2012) ಮುಖ್ಯಮಂತ್ರಿ ಶ್ರೀ ಜಗದೀಶ ಶೆಟ್ಟರ,
ಸಚಿವ ಗೋವಿಂದ ಕಾರಜೋಳ, ಗದಗಿನ ಶ್ರೀಗಳು ಮುಂತಾದವರು

---

ಡಾ. ಮಹಾಂತ ಶಿವಯೋಗಿಗಳವರಿಗೆ, ಗದಗಿನ ಡಾ. ತೋಂಟದ ಸಿದ್ಧಲಿಂಗ
ಮಹಾಸ್ವಾಮಿಗಳು ಮತ್ತು ಶ್ರೀ ದೇ. ಜವರೇಗೌಡರಿಗೆ
ಕರ್ನಾಟಕ ಸರಕಾರದ 'ಬಸವ ಪುರಸ್ಕಾರ ಪ್ರಶಸ್ತಿ' ಗೌರವ (31-7-2012)



ಮುಖ್ಯಮಂತ್ರಿ ಶ್ರೀ ಜಗದೀಶ ಶೆಟ್ಟರ,
ಸಚಿವ ಗೋವಿಂದ ಕಾರಜೋಳ ಮುಂತಾದವರು

## ಹಿರೇಬಾದವಾಡಗಿ ಶಾಖಾಮಠದಲ್ಲಿ ಶಿವಾನುಭವ ಶಿಬಿರ



ಇಳಕಲ್ಲ ಶ್ರೀಗಳು, ಕೂಡಲ ಸಂಗಮ ಶ್ರೀಗಳು, ವಿ. ಸಿದ್ಧರಾಮಣ್ಣ ಶರಣರು
ಶ್ರೀ ಅಂ. ಹಾ. ಹುಚ್ಚಪ್ಪ ಮೇಷ್ಟ್ರು, ಶ್ರೀ ಗುರುಮಹಾಂತ ಸ್ವಾಮಿಗಳು

---

## ಸಿದ್ದಯ್ಯನ ಕೋಟೆ ಶಾಖಾಮಠದಲ್ಲಿ ಪೂಜ್ಯರು




ಸಿದ್ಧಯ್ಯನ ಕೋಟೆ ಇಳಕಲ್ಲ, ಶಿರೂರ ಶ್ರೀಗಳು ಹಾಗೂ ನಾಡೋಜ ಕೊ. ಚೆನ್ನಬಸಪ್ಪನವರು,
ವಿ.ಸಿದ್ಧರಾಮಣ್ಣ ಶರಣರು

ನಾಗನೂರ ಶ್ರೀ ಗುರುಬಸವಮಠದ ಶರಣ ದಂಪತಿಗಳಾದ



ಶ್ರೀ ಬಸವಪ್ರಕಾಶ ಸ್ವಾಮಿಗಳು, ಶರಣೆ ಬಸವ ಗೀತಾ ತಾಯಿ ಅವರಿಗೆ
ನಿರಂಜನ ಜಂಗಮ ದೀಕ್ಷೆ

---

ಗದಗ ವೀರೇಶ್ವರ ಪುಣ್ಯಾಶ್ರಮದ ಶ್ರೀ ಕಲ್ಲಯ್ಯಜ್ಜನವರು



ಪೂಜ್ಯ ಮಹಾಂತ ಶಿವಯೋಗಿಗಳವರಿಗೆ
ಗೌರವ ಸತ್ಕಾರ ಮಾಡಿದ್ದು

ಮುಂಡರಗಿ ತೋಂಟದಾರ್ಯಮಠದ
ಶ್ರೀ ನಿಜಗುಣಾನಂದ ಪ್ರಭುಸ್ವಾಮಿಗಳಿಗೆ ನಿರಂಜನ ಜಂಗಮ ದೀಕ್ಷೆ



ಪೂಜ್ಯ ಡಾ. ಮಹಾಂತ ಶಿವಯೋಗಿಗಳವರಿಂದ

ಶ್ರೀ ವಿಜಯಮಹಾಂತ ಶಿವಯೋಗಿಗಳ ಶತಮಾನೋತ್ಸವದಲ್ಲಿ
ಸರ್ವಧರ್ಮ ಗುರುಗಳು ಭಾರತ ಸಂವಿಧಾನ ತಲೆಯ ಮೇಲೆ ಹೊತ್ತು
ಪ್ರತಿಜ್ಞೆ ಸ್ವೀಕಾರ ಸಮಾರಂಭ



ಪೂಜ್ಯ ಡಾ. ಮಹಾಂತ ಶಿವಯೋಗಿಗಳವರ ಸನ್ನಿಧಾನ

## ಇಂಗ್ಲೆಂಡಿನಲ್ಲಿ ಮಹಾಂತ ಸ್ವಾಮಿಗಳು
## ಲಂಡನ್-ಹಿಥ್ರೊ ವಿಮಾನ ನಿಲ್ದಾಣದಲ್ಲಿ ಸ್ವಾಗತ (ಜುಲೈ ೧೪-೧೯೯೦)



ಡಾ. ಎಸ್. ಮಹಾದೇವಯ್ಯ, ಬೇಲಿಮಠ ಶ್ರೀಗಳು, ಪ್ರೊ. ಸಿದ್ಧಣ್ಣ ಲಂಗೋಟಿ
ಶ್ರೀ ಬಿ.ಎಲ್. ಪಾಟೀಲ, ಡಾ. ರುದ್ರಪ್ಪನವರು, ಶ್ರೀ ಮಹಾಂತ ಅಪ್ಪಗಳು

---

## ವೀರಶೈವ ಸಮಾಜ ಆಫ್ ಯುನೈಟೆಡ್ ಕಿಂಗ್‌ಡಮ್
## ಇಂಗ್ಲೆಂಡಿನಲ್ಲಿ ಬಸವ ಜಯಂತ್ಯುತ್ಸವ (೨೧-೭-೧೯೯೦)




ಶ್ರೀ ಬಿ.ಎಲ್. ಪಾಟೀಲ ಅಥಣಿ, ಶ್ರೀ ಶಿವರುದ್ರಸ್ವಾಮಿಗಳು ಬೇಲಿಮಠ, ಬೆಂಗಳೂರು
ಶ್ರೀ ಮಹಾಂತಸ್ವಾಮಿಗಳು ಚಿತ್ತರಗಿ-ಇಳಕಲ್ಲ, ಪ್ರೊ. ಸಿದ್ಧಣ್ಣ ಲಂಗೋಟಿ

## ಲಂಡನ್ನ ಮಹಾನಗರದ 'ಭಾರತೀಯ ವಿದ್ಯಾಭವನ'ದಲ್ಲಿ :
(೧೬-೭-೧೯೯೦)



ಶ್ರೀ ಬಿ.ಎಲ್. ಪಾಟೀಲ, ಶ್ರೀ ಶಿವರುದ್ರಸ್ವಾಮಿಗಳು, ಶ್ರೀ ಮಹಾಂತ ಸ್ವಾಮಿಗಳು
ಶ್ರೀ ಮತ್ತೂರು ಕೃಷ್ಣಮೂರ್ತಿ, ಪ್ರೊ. ಸಿದ್ಧಣ್ಣ ಲಂಗೋಟಿ

---

## ಇಂಗ್ಲೆಂಡಿನ ರಾಮಕೃಷ್ಣವೇದಾಂತ ಸೆಂಟರ್‌ನಲ್ಲಿ :
(೧೮-೭-೧೯೯೦)



ಪೂಜ್ಯ ಮಹಾಂತಸ್ವಾಮಿಗಳು, ಪೂಜ್ಯ ಸ್ವಾಮಿ ಭವ್ಯಾನಂದರು, ಬೇಲಿಮಠ ಶ್ರೀಗಳು
ಪ್ರೊ. ಸಿದ್ಧಣ್ಣ ಲಂಗೋಟಿ, ಡಾ. ಎಸ್. ಮಹಾದೇವಯ್ಯನವರು, ಶ್ರೀ ತ್ರಿಪುರಾನಂದರು

ಬ್ರೆಂಟ್ ಇಂಡಿಯನ್ ಅಸೋಸಿಯೇಶನ್ ವೆಂಬ್ಲೇ ಇಂಗ್ಲೆಂಡ
(೧೮-೭-೧೯೯೦)




ಶ್ರೀ ಎ.ಸಿ. ಪಟೇಲ್, ಶ್ರೀ ಮಹಾಂತ ಸ್ವಾಮಿಗಳು
ಶ್ರೀ ಶಿವರುದ್ರಸ್ವಾಮಿಗಳು, ಪ್ರೊ. ಸಿದ್ಧಣ್ಣ ಲಂಗೋಟಿ

ನವನತ ವಣಿಕ ಅಸೋಸಿಯೇಶನ್, ಇಂಗ್ಲೆಂಡ
'ಬಸವಣ್ಣನವರ ಆರ್ಥಿಕ ವಿಚಾರಗಳು' – ಗೋಷ್ಠಿ (೧೯-೭-೧೯೯೦)




ವಣಿಕ ಸಂಘದ ಅಧ್ಯಕ್ಷ ಡಿ.ಯು. ಲಾವಿಂಗಿಯಾ, ಪೂಜ್ಯ ಬೇಲಿಮಠ ಶಿವರುದ್ರಸ್ವಾಮಿಗಳು
ಪೂಜ್ಯ ಶ್ರೀ ಮಹಾಂತ ಸ್ವಾಮಿಗಳು, ಪ್ರೊ. ಸಿದ್ಧಣ್ಣ ಲಂಗೋಟಿ

## ಇಂಗ್ಲೆಂಡಿನಲ್ಲಿ ಪ್ರೆಸ್ಟನ್ ನಗರದಲ್ಲಿ ಬಸವಜಯಂತಿ
## ಇಷ್ಟಲಿಂಗ ದೀಕ್ಷಾ ಸಮಾರಂಭ (೨೧-೭-೧೯೯೮)




ಪೂಜ್ಯ ಮಹಾಂತಸ್ವಾಮಿಗಳು ಇಳಕಲ್ಲ, ಪೂಜ್ಯ ಶಿವರುದ್ರಸ್ವಾಮಿಗಳು ಬೇಲಿಮ
ಪ್ರೊ. ಸಿದ್ಧಣ್ಣ ಲಂಗೋಟಿ ರಾಮದುರ್ಗ- ಲಿಂಗತತ್ವದ ವಿವರಣೆ

---

## ಲಂಡನ್ ನಗರದ ಗುಜರಾತ ಭವನದಲ್ಲಿ
## ಬಸವತತ್ವ -ಅನುಭಾವ



ಪೂಜ್ಯ ಮಹಾಂತಶಿವಯೋಗಿಗಳು, ಪೂಜ್ಯ ಬೇಲಿಮಠ ಶ್ರೀಗಳು
ಶ್ರೀ ಸಿದ್ಧಣ್ಣ ಲಂಗೋಟಿ, ಶ್ರೀ ಎಸ್. ಮಹಾದೇವಯ್ಯನವರು

ಪೂಜ್ಯರು ಕೆ.ಎಲ್.ಇ. ಆಸ್ಪತ್ರೆಯಲ್ಲಿದ್ದಾಗ ದರ್ಶನಕ್ಕೆ ಬಂದ ಶ್ರೀಗಳು



ಪೂಜ್ಯ ಗದಗ ಜಗದ್ಗುರುಗಳು, ಶ್ರೀ ಸಿದ್ಧೇಶ್ವರ ಸ್ವಾಮಿಗಳು, ವಿಜಯಪುರ
ಬೆಳಗಾವಿಯ ಪೂಜ್ಯ ಸಿದ್ಧರಾಮ ಸ್ವಾಮಿಗಳು, ಶ್ರೀ ಆತ್ಮಾರಾಮ ಸ್ವಾಮಿಗಳು

---

ಪೂಜ್ಯರಿಗೆ ಕೆ.ಎಲ್.ಇ. ಆಸ್ಪತ್ರೆಯಲ್ಲಿ ಗಾಲಿ ಕುರ್ಚಿಯ ಮೇಲೆ ಕೂಡಿಸಿ ವಾಯುವಿಹಾರ



ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು, ಶ್ರೀ ಶಾಂತಣ್ಣ ಸರಗಣಾಚಾರಿ ಇಳಕಲ್ಲ

## ರಾಷ್ಟ್ರೀಯ ಬಸವ ಪುರಸ್ಕಾರ ಪ್ರಶಸ್ತಿ ಪುರಸ್ಕೃತರಾಗಿದ್ದ ಶ್ರೀಗಳವರ



ಲಿಂಗಶರೀರದ ಮೇಲೆ ರಾಷ್ಟ್ರಧ್ವಜ ಹೊದಿಸಿ ಗೌರವ

---

## ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡೆಯೂರಪ್ಪನವರಿಂದ ಹಾಗೂ ಜಿಲ್ಲಾಡಳಿತ ಪೋಲೀಸರಿಂದ ಗೌರವ ವಂದನೆ



## ಬಸವ ಮಹಾಬಯಲಿನಲಿ ಬಯಲಾದ ಶ್ರೀ



ಲಿಂ. ಡಾ. ಮಹಾಂತ ಶಿವಯೋಗಿಗಳು
(೧೯-೦೫-೨೦೧೮)



ಲಿಂ. ಡಾ. ಮಹಾಂತ ಶಿವಯೋಗಿಗಳವರ ಸಮಾಧಿ
(ಅಂತಿಮ ವಿಶ್ರಾಂತಿ ಸ್ಥಳ) ೨೧-೫-೨೦೧೮

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

# ಯುಗಪುರುಷ ಮಹಾಂತ ಶಿವಯೋಗಿಗಳು

## ಭಾಗ-೧

**ಬಸವಗುರು ಪ್ರಣೀತ ಲಿಂಗಾಯತ ಧರ್ಮ-ಪರಂಪರೆ :**

ಹನ್ನೆರಡನೆಯ ಶತಮಾನದಲ್ಲಿ ವಿಶ್ವಗುರು ಬಸವಣ್ಣನವರು ಸಕಲ ಜೀವಾತ್ಮರ ಲೇಸಿಗಾಗಿ, ಮಾನವ ಕುಲದ ಕಲ್ಯಾಣಕ್ಕಾಗಿ, ಸಮತೆ-ಸ್ವಾತಂತ್ರ್ಯ ಸಹೋದರತ್ವ-ಮಾನವೀಯತೆಯ ತಳಹದಿಯ ಮೇಲೆ, ಅರಿವು-ಆಚಾರ-ಅನುಭಾವದ ಸೈದ್ಧಾಂತಿಕ ನೆಲಗಟ್ಟಿನ ಮೇಲೆ ಅಂದಿನ ಕಲ್ಯಾಣದಲ್ಲಿ ಇಷ್ಟಲಿಂಗ ಪರಂಪರೆಯ ವಿನೂತನವಾದ **'ಲಿಂಗಾಯತ ಧರ್ಮ'**ವನ್ನು ಸ್ಥಾಪಿಸಿದರು.

ಲಿಂಗಾಯತ ಧರ್ಮವು ಜಾತಿ ರಹಿತ ಹಾಗೂ ಧರ್ಮ ಸಹಿತವಾದ ಬಸವ ಧರ್ಮವಾಗಿದ್ದು ದಯವೇ ಈ ಧರ್ಮದ ಮೂಲವಾಗಿದೆ. ಲಿಂಗಾಯತ ಧರ್ಮವು ಪ್ರಗತಿಪರ ಧರ್ಮವಾಗಿದ್ದು. ಇದು ಮೂಢ ಸಂಪ್ರದಾಯ-ಕಂದಾಚಾರಗಳನ್ನು ತಿರಸ್ಕರಿಸಿದೆ. ಈ ಧರ್ಮಕ್ಕೆ ವೇದ-ಆಗಮ-ಉಪನಿಷತ್ತು ಶಾಸ್ತ್ರ-ಪುರಾಣಗಳು ಆಧಾರವಲ್ಲ. ಲಿಂಗಾನುಭಾವಿಯ ಸ್ವಾನುಭಾವವೇ ಆಧಾರವಾಗಿದೆ. ಬಸವಾದಿ ಶರಣರ ಸ್ವಾನುಭಾವದ ವಚನಗಳೇ **ಧರ್ಮಗ್ರಂಥ.**

ಬಸವಗುರು ಪ್ರಣೀತ ಲಿಂಗಾಯತ ಧರ್ಮದಲ್ಲಿ ಬ್ರಾಹ್ಮಣ-ಶೂದ್ರರೆಂಬ ವರ್ಣಭೇದವಿಲ್ಲ. ಗೃಹಸ್ಥ-ಸನ್ಯಾಸಿಯೆಂಬ ಆಶ್ರಮಭೇದವಿಲ್ಲ. ಬಡವ-ಬಲ್ಲಿದರೆಂಬ ವರ್ಗಭೇದವಿಲ್ಲ. ಸ್ತ್ರೀ-ಪುರುಷರೆಂಬ ಲಿಂಗಭೇದವಿಲ್ಲ. ಸ್ಪೃಶ್ಯ-ಅಸ್ಪೃಶ್ಯರೆಂಬ ಮನೋರೋಗವಿಲ್ಲ. ವಿಪ್ರಮೊದಲು ಅಂತ್ಯಜ ಕಡೆಯಾಗಿ ಅಂಗದ ಮೇಲೆ ಇಷ್ಟಲಿಂಗ ಸಂಸ್ಕಾರ ಪಡೆದವರೆಲ್ಲ ಸಮಾನರು ಎಂಬ ಧಾರ್ಮಿಕ-ಸಾಮಾಜಿಕ ಸಮಾನತೆಯಿದೆ. ಗುರುಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬ ಅಷ್ಟಾವರಣಗಳು ಅಂಗವಾಗಿ, ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಚಾರವೆಂಬ ಪಂಚಾಚಾರಗಳು ಪ್ರಾಣವಾಗಿ, ಭಕ್ತ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಎಂಬ ಷಟ್‌ಸ್ಥಲವೇ ಆತ್ಮವಾಗಿ ಏಕದೇವೋಪಾಸನೆಯ ವ್ಯವಸ್ಥೆ, ಲಿಂಗಾಂಗ ಸಾಮರಸ್ಯದ ಧ್ಯೇಯುವುಳ್ಳ ಸಹಜ-ಸರಳ ಸುಂದರ ಧರ್ಮವೇ ಲಿಂಗಾಯತ ಧರ್ಮವಾಗಿದೆ.

ಸತ್ಯಶುದ್ಧ ಕಾಯಕ, ನಿತ್ಯಲಿಂಗಾರ್ಚನೆ, ಭಕ್ತಿ ದಾಸೋಹ, ಪ್ರಸಾದ ಸಂತೃಪ್ತಿಯ ಶರಣ ಜೀವನ ಈ ಧರ್ಮದ ಆದರ್ಶವಾಗಿದೆ. ದೇವಭಕ್ತರ ನಮುವಿನ

ಅಡ್ಡಗೋಡೆಗಳಂತಿರುವ ಪೂಜಾರಿ–ಪುರೋಹಿತ ವರ್ಗವನ್ನು ದೂರೀಕರಿಸಿ, ಅಹಂಗ್ರಹೋಪಾಸನೆಯ ಇಷ್ಟಲಿಂಗಾರ್ಚಾನೆಯ ಧರ್ಮವಾಗಿದೆ.

**ಅನುಭವ ಮಂಟಪ : ಪ್ರಜಾಪ್ರಭುತ್ವ ಪ್ರಥಮ ಪಾರ್ಲಿಮೆಂಟ್ :**

ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯವಾಗಿರುವುದರಿಂದ ಅನುಭವಗಳ ಚಿಂತನ–ಮಂಥನ–ಕಾರ್ಯಾಚರಣೆ–ವ್ಯಷ್ಟಿ–ಸಮಷ್ಟಿಯ ಕಲ್ಯಾಣಕ್ಕಾಗಿ ಧರ್ಮಪಿತ ಬಸವಣ್ಣನವರು **'ಅನುಭವ ಮಂಟಪ'** ವೆಂಬ ವಿಶ್ವನೂತನವಾದ, ಪ್ರಪಂಚದ ಪ್ರಜಾಪ್ರಭುತ್ವದ ಪ್ರಪ್ರಥಮ ಸಮಾಜೋ–ಧಾರ್ಮಿಕ ಸಂಸ್ಥೆಯೊಂದನ್ನು ಸ್ಥಾಪಿಸಿದರು. ಈ ಸಂಸ್ಥೆಯ ಮೂಲಕ ಬಸವಣ್ಣನವರು ಅದ್ಭುತವಾದ ಸಮಾಜೋ ಧಾರ್ಮಿಕ ಪರಿವರ್ತನೆಯನ್ನೇ ತಂದರು.

ಬಸವಗುರು ಸ್ಥಾಪಿಸಿದ ಲಿಂಗಾಯತಧರ್ಮ–ಅನುಭವಮಂಟಪ ಇವುಗಳ ಕೀರ್ತಿ–ವಾರ್ತೆಯು ನಾಡಿನೆಲ್ಲೆಡೆಯಲ್ಲಿ ಹಬ್ಬಿದಾಗ ಕಾಶ್ಮೀರದಿಂದ–ಕನ್ಯಾಕುಮಾರಿವರೆಗಿನ ಶರಣ–ಶರಣೆಯರೆಲ್ಲ ಕಲ್ಯಾಣಕ್ಕೆ ಆಗಮಿಸಿದರು. ತಮ್ಮ ತಮ್ಮ ಶಕ್ತಿ–ಸಾಮರ್ಥ್ಯ–ಒಲವಿಗನುಸಾರವಾದ **'ಕಾಯಕ'** ದಾಸೋಹ ಕೈಕೊಂಡು ಸ್ವಾವಲಂಬನೆಯ ಸ್ವಾಭಿಮಾನದ ಶರಣಜೀವನ ಪ್ರಾರಂಭಿಸಿದರು. ಅರಿವು–ಆಚಾರ–ಅನುಭಾವವನು ಅಂಗವಿಸಿಕೊಂಡು ೭೭೦ ಅಮರಗಣಂಗಳೆನಿಸಿದರು.

**ಶೂನ್ಯ ಸಿಂಹಾಸನ–ಪೀಠ ಪರಂಪರೆ :**

ಅಷ್ಟಾವರಣದ ಅರಿವು, ಪಂಚಾಚಾರದ ಆಚರಣೆ, ಷಟ್‌ಸ್ಥಲದ ಅನುಭಾವದ 'ತತ್ವಜ್ಞಾನ, ಸಿದ್ಧಾಂತ, ದರ್ಶನ'ದ ಚಿಂತನ ಮತ್ತು ಪ್ರಸಾರಕ್ಕಾಗಿ ಧರ್ಮಪಿತ ಬಸವಣ್ಣನವರು ತಮ್ಮ ಸ್ವಾನುಭಾವದ ನಿಲವಿನಿಂದ 'ಶೂನ್ಯ ಸಿಂಹಾಸನ' ವನ್ನು ಕಲ್ಯಾಣದ ಅನುಭವಮಂಟಪದಲ್ಲಿ ರಚಿಸಿದರು.

ಶೂನ್ಯ ಸಿಂಹಾಸನದ ಅಧ್ಯಕ್ಷರಾಗಿ ಅಲ್ಲಮಪ್ರಭುದೇವ, ಚೆನ್ನಬಸವಣ್ಣ ಸಿದ್ಧರಾಮೇಶ್ವರರು ಅನುಭವ ಮಂಟಪದ ಕಾರ್ಯಕಲಾಪಗಳನ್ನು ಸಾಂಗವಾಗಿ ಮುನ್ನಡೆಸಿಕೊಂಡು ಬಂದರು.

'ಕೂಡಲಸಂಗನ ರಾಜ್ಯವ ಹಂಚಿಕೊಳ್ಳಿ ನಿಮನಿಮಗೆಲ್ಲಾ' ಎಂಬ ಮರ್ತ್ಯಲೋಕವೆಂಬ ಕರ್ತಾರನ ಕಮ್ಮಟದಲ್ಲಿ ಸರ್ವರಿಗೂ ಸರ್ವರಂಗಗಳಲ್ಲಿ ಸಮತೆಯನ್ನು ಸಾರಿದ್ದರ ಪರಿಣಾಮವಾಗಿ, ಪಟ್ಟಭದ್ರ ಹಿತಾಸಕ್ತಿಗಳು ಪಿತೂರಿ ನಡೆಸಿ ಕಲ್ಯಾಣಕ್ರಾಂತಿ ಜರಗುವಂತೆ ಮಾಡಿದ ಕಾರಣ, ಬಸವಾದಿ ಶರಣರಲ್ಲಿ ಅನೇಕರು ಬಲಿದಾನವಾದರು. ಉಳಿದವರು ಪ್ರಶಾಂತ ತಾಣಗಳನ್ನು ಅರಸಿಕೊಂಡು ಹೋಗಿ ಅಲ್ಲಲ್ಲಿ ಮಹಾಬಯಲಿನಲ್ಲಿ ಬಯಲಾದರು. ಮಾನವಕಲ್ಯಾಣದ ಒಂದು ಮಹಾನ್ ಕ್ರಾಂತಿಯು ಇತಿಹಾಸದ ಪುಟಗಳಲ್ಲಿ ಸೇರಿತು.

**ಮಠಗಳ ಪರಂಪರೆ :**

ಹನ್ನೆರಡನೆಯ ಶತಮಾನದಲ್ಲಿ ಚಾತುರ್‌ವರ್ಣ ಧರ್ಮ-ಸಮಾಜ ವ್ಯವಸ್ಥೆಯನ್ನು, ಪೂಜಾರಿ-ಪುರೋಹಿತರ ಧಾರ್ಮಿಕ ಶೋಷಣೆಯನ್ನು, ಕರ್ಮಠ ಮೂಢನಂಬಿಕೆಗಳನ್ನು ನಿರಾಕರಿಸಿ ವಿಪ್ರ-ಅಂತ್ಯಜವೆಂಬ ವರ್ಣಭೇದವಿಲ್ಲದ, ಗೃಹಸ್ಥ ಸನ್ಯಾಸಿ ಎಂಬ ಆಶ್ರಮಭೇದವಿಲ್ಲದ, ಬಡವ-ಬಲ್ಲಿದರೆಂಬ ವರ್ಗಭೇದವಿಲ್ಲದ, ಸ್ತ್ರೀ-ಪುರುಷರೆಂಬ ಲಿಂಗಭೇದವಿಲ್ಲದ, ನೂರೆಂಟು ಕುಲ-ಜಾತಿ-ಮತ-ಪಂಥಗಳ ಗೊಂದಲವಿಲ್ಲದ ಸಮತೆ-ಸ್ವಾತಂತ್ರ್ಯ-ಬಂಧುತ್ವಗಳ ತಳಹದಿಯ ಮೇಲೆ ವಿನೂತನವಾದ ಇಷ್ಟಲಿಂಗ ಪರಂಪರೆಯ ಲಿಂಗಾಯತ ಧರ್ಮ-ಸಮಾಜ-ಸಂಸ್ಕೃತಿಗಳು, ಕಲ್ಯಾಣ ಕ್ರಾಂತಿಯ ತರುವಾಯ ಶೈವ-ವೈದಿಕ ಕರ್ಮಠ ಪುರೋಹಿತ ಶಾಹಿಯ ಕುತಂತ್ರಕ್ಕೆ ಬಲಿಯಾಗಿ ಹೋದವು.

೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ ಲಿಂಗವಂತ ಧರ್ಮವು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳತೊಡಗಿತ್ತು. ಆಗ ಯಡೆಯೂರ ತೋಂಟದ ಸಿದ್ಧಲಿಂಗ ಶಿವಯೋಗಿಗಳ ನೇತೃತ್ವದಲ್ಲಿ ಬಸವಾದಿ ಶರಣರ ಧರ್ಮ-ಸಂಸ್ಕೃತಿಯ ಪುನರುತ್ಥಾನಕ್ಕಾಗಿ ನೂರೊಂದು ವಿರಕ್ತರು, ಏಳುನೂರೊಂದು ವಿರಕ್ತರು ಇಡೀ ನಾಡನ್ನೆಲ್ಲ ಸಂಚರಿಸುತ್ತಾ, ಮಠ-ಪೀಠಗಳ ಉಗಮಕ್ಕೆ ಕಾರಣರಾದರು. ಈ ಪರಂಪರೆಯು ತಾತ್ವಿಕವಾಗಿ ೧೨ನೆಯ ಶತಮಾನದ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದ ಶೂನ್ಯ ಸಿಂಹಾಸನದ ಅಧ್ಯಕ್ಷ ಅಲ್ಲಮಪ್ರಭುವು ತಮ್ಮ ಮೂಲವೆಂದು ಹೇಳಿಕೊಂಡು ಬಂದಿದೆ.

“ಶ್ರೀ ಗುರು ಬಸವ ಲಿಂಗಾಯ ನಮಃ ಶ್ರೀ ಮನ್ಮಹಾಶೂನ್ಯ ಸಿಂಹಾಸನಾಧೀಶ್ವರ ಜಗದ್ಗುರುಗಳಾದ ಅಲ್ಲಮ ಪ್ರಭು, ಚೆನ್ನಬಸವರಾಜೇಂದ್ರ ಸ್ವಾಮಿಗಳವರ ಶಿಷ್ಯ ಪರಂಪರೆ ವಂಶರಾತ್ನಾಕರ ಪ್ರಭುವಂಶೋದ್ಭವರಾದ ಗುರುಗಳ ವಿವರವು” ಎಂದು ‘ನಿರಂಜನ ವಂಶ ರತ್ನಾಕರ’ ಕೃತಿಯಲ್ಲಿ ವಿವರಿಸಲ್ಪಟ್ಟಿದೆ.

ಕಾಲಗತಿಸಿದಂತೆ ಲಿಂಗಾಯತ ‘ಅನುಭವ ಮಂಟಪ’ ಪರಂಪರೆಯು ಲಿಂಗಾಯತ-ವೀರಶೈವಮಠ-ಪೀಠಗಳಾಗಿ ಬದಲಾವಣೆಗೊಂಡು, ಗುರುವರ್ಗ-ವಿರಕ್ತವರ್ಗ ಎಂದು ವಿಭಜಿತಗೊಂಡು ಐದು ಗುರುವರ್ಗದ ಹಾಗೂ ಐದು ವಿರಕ್ತವರ್ಗದ ಮಠ-ಪೀಠಗಳು ಪ್ರಾರಂಭಗೊಂಡವು. ಚೀಲಾಳ, ಕುಮಾರ, ಮುರಗಾ, ಕೆಂಪಿನ, ಶೀಲ ಸಮಯಗಳೆಂದು ಕರೆದುಕೊಂಡು ವಿರಕ್ತ ಪರಂಪರೆ ಮುಂದುವರೆಯಿತು. ಇವುಗಳ ಅಡಿಯಲ್ಲಿ ನಾಡಿನಾದ್ಯಂತ ಗ್ರಾಮ-ಪಟ್ಟಣಗಳಲ್ಲಿ ಸಾವಿರಾರು ಮಠಗಳ ರಚನೆಗೆ-ಸೃಷ್ಟಿಗೆ ಪ್ರಾರಂಭವಾಯಿತು.

**ಸವದಿ ವಿರಕ್ತಮಠದ-ಗುರು ಪರಂಪರೆ :**

ಕರ್ನಾಟಕದ ಇತಿಹಾಸದಲ್ಲಿ ‘ಜಂಬುಖಂಡಿ ಎಳ್ಪತ್ತು’ ಎಂಬ ಹೆಸರಿನ

ಉಲ್ಲೇಖವಿದೆ. ಈ ಜಂಬುಖಂಡಿ ಎಪ್ಪತ್ತರ ಹತ್ತಿರದ ಸುವರ್ಣವಾಡ ಎಂಬುದೇ 'ಸವದಿ' ಯಾಗಿರಬಹುದು ಅಥವಾ ಸೌಬರಮುನಿಯು ತಪಸ್ಸು ಮಾಡಿದ ಸ್ಥಳವಾದುದರಿಂದ 'ಸವದಿ' ಎಂಬ ಹೆಸರು ಬಂದಿರಬಹುದು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನಕಾಲದಿಂದಲೂ ಚಾಲುಕ್ಯರ ಸಾಮ್ರಾಜ್ಯದ ಒಳಗೆ ಇರುವ ಪ್ರದೇಶವಾಗಿತ್ತು. ಇಲ್ಲಿಯ ಸುಕ್ಷೇತ್ರವೇ ವಿರಕ್ತಮಠ.

**ಸವದಿ ಸಂಗನಬಸವ ಮಠದ ಗುರುಪರಂಪರೆ :**

(ಮಠಾಧೀಶರಾಗಿ ಸೇವೆಸಲ್ಲಿಸಿದ ಕಾಲ)

೧. ಪೂಜ್ಯ ಶ್ರೀ ಬಸವಲಿಂಗಸ್ವಾಮಿಗಳು (ಸವದಿ) (೧೭೫೦ ರಿಂದ ೧೮೦೦)
೨. ಪೂಜ್ಯ ಶ್ರೀ ಮುರುಘೇಂದ್ರ ಸ್ವಾಮಿಗಳು (ಸವದಿ) (೧೮೦೧ ರಿಂದ ೧೮೫೦)
೩. ಪೂಜ್ಯ ಶ್ರೀ ಸೋಮನಾಥ ಸ್ವಾಮಿಗಳು (ಹಿಪ್ಪರಗಿ) (೧೮೫೧ ರಿಂದ ೧೮೯೦)
೪. ಪೂಜ್ಯ ಶ್ರೀ ಸಂಗನಬಸವ ಸ್ವಾಮಿಗಳು (ಹಿಪ್ಪರಗಿ) (೧೮೯೧ ರಿಂದ ೧೯೪೦)
**೫. ಶ್ರೀ ಮಹಾಂತ ಸ್ವಾಮಿಗಳು (ಹಿಪ್ಪರಗಿ)** (೧೯೪೧ ರಿಂದ ೨೦೧೮)
**೬. ಶ್ರೀ ಗುರುಮಹಾಂತ ಸ್ವಾಮಿಗಳು (ನರಗುಂದ)** (೨೦೦೫ ರಿಂದ...............)

**ಬಸವಜ್ಯೋತಿ ಶ್ರೀ ಮಹಾಂತ ಶಿವಯೋಗಿಗಳು :**

ಸವದಿಯ ವಿರಕ್ತಮಠಕ್ಕೆ (ಈ ಮಠವೇ ಪೂಜ್ಯ ಕಾಯಕಯೋಗಿ ಶ್ರೀ ಸಂಗಬಸವ ಸ್ವಾಮಿಗಳವರ ಪ್ರಭಾವದಿಂದಾಗಿ ಭಕ್ತರ ಹೃದಯದಲ್ಲಿ ಸಂಗನಬಸವಮಠ ಸವದಿ ಎಂದೇ ಪ್ರಖ್ಯಾತವಾಯಿತು) **೧೯೪೧ರಿಂದ ೫ನೆಯ ಪೀಠಾಧಿಪತಿಗಳಾಗಿ,** ಮುಂದೆ ೧೯೭೦ ರಿಂದ ಇವರೇ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ೧೯ನೆಯ ಪೀಠಾಧಿಪತಿಗಳಾಗಿ ೨೦೧೮ ಮೇ, ೧೯ರ ವರೆಗೆ ಬಸವತತ್ವ ಪ್ರಸಾರದ ಮಹಾಮಣಿಹವನ್ನು ಪೂರೈಸಿದರು. ಪರಮಪೂಜ್ಯರು ಮಹಾಂತ ಜೋಳಿಗೆಯ ಶಿವಶಿಲ್ಪಿ, ಶಿವಾನುಭವ ಚರವರ್ಯ, ಆಧುನಿಕ ಯುಗದ ಬಸವಜ್ಯೋತಿ ಯೆಂದು ಪ್ರಸಿದ್ಧರಾಗಿದ್ದಾರೆ. ಸಪ್ತ ಸಮುದ್ರಗಳಾಚೆಗೂ ಹೋಗಿ, ಪಾಶ್ಚಿಮಾತ್ಯದೇಶಗಳಲ್ಲಿ ಬಸವ ಸಂದೇಶವನ್ನು ಸಾರಿ ಬಂದಿದ್ದಾರೆ. ಪೂಜ್ಯರ ಎಂಟು ದಶಕಗಳ ಸಾಧನೆಗಳು ಅವರ್ಣನೀಯ, ಅದ್ವಿತೀಯ, ಅದ್ಭುತ, ಅನುಪಮ-ವಾಗಿವೆ.

ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳವರು ಸಾಗಿ ಬಂದಿರುವ ಈ ೮೮ ವರುಷಗಳ ದಾರಿಯು ಹೂವಿನ ಹಾಸಿಗೆಯಾಗಿರಲಿಲ್ಲ. ಮೂಢ ನಂಬಿಕೆ, ಅಂಧಶ್ರದ್ಧೆ, ಕರ್ಮಠ ವೀರಶೈವ ಪುರೋಹಿತಶಾಹಿಯ ಕಲ್ಲು-ಮುಳ್ಳಿನ, ಕಂದಕ-ಕೊರಕಲುಗಳ ದುರ್ಗಮ ಕಾಡಿನ ಮಾರ್ಗವಾಗಿತ್ತು. ಮರೆವಿನ ಮಾನವರ ಘೋರಾಣ್ಯದಲ್ಲಿ ಮತಾಂಧ, ಜಾತ್ಯಾಂಧರೆಂಬ ಹುಲಿ-ಕರಡಿಗಳ ಕಷ್ಟ ಕೀಟಲೆ-

ಕೋಟಲೆಗಳಿಗೆ ಹೆದರಿ ಹಿಮ್ಮಟ್ಟದೆ, ಅಂಜದೆ ಮುನ್ನಡೆದ ಧೀರ, ನಿರಂಜನ ಜಂಗಮ ಈ ಮಹಾಂತಪ್ಪಗಳವರು.

ಸಂಸಾರವೆಂಬ ಅಡವಿಯಲ್ಲಿ
ಹುಲಿಯುಂಟು, ಕರಡಿಯುಂಟು
ಶರಣನಂಜ ! ಮಹಾಧೀರ ಶರಣನಂಜ !
ಕೂಡಲಸಂಗನ ಶರಣ ನಿರ್ಭಯ !

ಅಪ್ಪ ಬಸವಣ್ಣನವರ ವಚನಗಳನ್ನೇ ಶ್ರೀರಕ್ಷೆಯಾಗಿಸಿಕೊಂಡು ಎಲ್ಲ ಹಂತಗಳನ್ನು ನಿರ್ಭಯವಾಗಿ ದಾಟಿ ಮುನ್ನಡೆದ ಶರಣ ಮಹಾಂತರಿವರು.

**ಜನನ-ಬಾಲ್ಯ-ಶಿಕ್ಷಣ :**

ಬಸವ ಜನ್ಮಭೂಮಿಯಾದ ವಿಜಾಪುರ ಜಿಲ್ಲೆಯ [ಇಂದಿನ ಬಾಗಲಕೋಟೆ ಜಿಲ್ಲೆಯ] ಜಮಖಂಡಿ ತಾಲೂಕಿನ ಒಂದು ಸುಂದರ ಗ್ರಾಮ ಹಿಪ್ಪರಗಿಯು. ಈ ಗ್ರಾಮವು ಕೃಷ್ಣಾನದಿಯ ದಡದ ಮೇಲಿರುವುದರಿಂದ ಇದನ್ನು ಹೊಳಿ ಹಿಪ್ಪರಗಿ ಎಂದು ಕರೆಯುತ್ತಾರೆ.

ಈ ಊರಿನ ಪಾಲಭಾವಿ ಮಠದ [ಹಿರೇಮಠ ಮನೆತನದ] ಅದೃಶ್ಯಪ್ಪನವರು ಹಾಗೂ ನೀಲಾಂಬಿಕೆ ಶರಣ ದಂಪತಿಗಳ ವಂಶಾವಳಿಯಲ್ಲಿ ಮೂರನೆಯ ತಲೆಮಾರಿನ ಶರಣದಂಪತಿಗಳಾದ ವಿರುಪಾಕ್ಷಯ್ಯ-ನೀಲಮ್ಮ [ನೀಲಾಂಬಿಕೆ]ಯವರ ಚಿದ್‌ಗರ್ಭದಲ್ಲಿ ಕ್ರಿ.ಶ.೧-೮-೧೯೩೦ರಲ್ಲಿ ಜನಿಸಿದ ಮೊದಲನೆಯ ಗಂಡುಮಗುವೇ ಮಹಾಂತಸ್ವಾಮಿಗಳು.

ತಾಯಿ ನೀಲಮ್ಮನವರು ಆರು ತಿಂಗಳ ಗಂಡು ಕೂಸಿನೊಂದಿಗೆ ತವರೂರು ಮಳಲಿ ಗ್ರಾಮದಿಂದ, ಪತಿಯ ಊರು ಹಿಪ್ಪರಿಗೆಗೆ ಬಂದರು. ಬಿದಿಗೆಯ ಚಂದ್ರನಂತೆ 'ಮಹಾಂತ ಶಿಶು' ಬೆಳೆಯ ತೊಡಗಿತು. ಕೆಲವೇ ದಿನಗಳಲ್ಲಿ ಸವದಿಯ ಪೂಜ್ಯ ಸಂಗನಬಸವಸ್ವಾಮಿಗಳು ಹಿಪ್ಪರಗಿಯ ವಿರುಪಕ್ಷಯ್ಯ-ನೀಲಮ್ಮ ದಂಪತಿಗಳ ಮನೆಗೆ ಆಗಮಿಸಿ 'ಮಹಾಂತಯ್ಯ' ಮಗುವಿಗೆ ಭಸ್ಮಧಾರಣೆ ಮಾಡಿ, ಇದು ವೈರಾಗ್ಯದ ಶಿಶು, ತಮ್ಮ ಸವದಿಯ ಮಠಕ್ಕೆ ಉತ್ತರಾಧಿಕಾರಿಯಾಗಿ ನೀಡಬೇಕೆಂದು ಕೇಳಿಕೊಂಡರು. ಗುರುಗಳ ವಿನಂತಿಗೆ ದಂಪತಿಗಳು ಶಿರಬಾಗಿ ಒಪ್ಪಿಗೆಯನ್ನಿತ್ತರು. ಮಗು ಮಹಾಂತನನ್ನು ಸಂಗನಬಸವಸ್ವಾಮಿಗಳ ಪಾದಕ್ಕೆ ಅರ್ಪಿಸಿದರು.

ಪೂಜ್ಯ ಸಂಗನಬಸವರ ಕಾರುಣ್ಯದ ಶಿಶುವಾಗಿ, ಬಾಲಲೀಲೆಗಳನ್ನಾಡುತ್ತಾ, ತಂದೆ-ತಾಯಿಯರಂತೆ ಇಷ್ಟಲಿಂಗಪೂಜೆ ಮಾಡಿಕೊಳ್ಳುತ್ತ, ಬಸವ ಶಿವನೇ. ಶಿವನೇ ಬಸವ ಎಂದು ತೊದಲ್ನುಡಿಗಳಲ್ಲಿ ಮಂತ್ರ ಪಠಿಸುತ್ತಾ ಬೆಳೆಯತೊಡಗಿದ 'ಮಹಾಂತಯ್ಯ' ಐದು ವರ್ಷ ತುಂಬಿದಾಗ ಊರಿನಲ್ಲಿಯೇ ಇದ್ದ ಸರ್ಕಾರಿ

ಶಾಲೆಗೆ ೧೯೩೫ರಲ್ಲಿ ಹೆಸರು ಹಚ್ಚಿದರು. ಆ ಶಾಲೆಯ ಮುಖ್ಯ ಶಿಕ್ಷಕರಾದ **ಶ್ರೀ ದೇವೇಂದ್ರ ಚೌಗಲೆ** ಅವರು ಬಾಲಕ ಮಹಾಂತಯ್ಯನಲ್ಲಿ ಸುಪ್ತವಾಗಿ ಹುದುಗಿದ್ದ ಪ್ರತಿಭೆಯನ್ನು ಕೆಲವೇ ದಿನಗಳಲ್ಲಿ ಅರಿತುಕೊಂಡರು. ಅಕ್ಷರಾಭ್ಯಾಸ ಪ್ರಾರಂಭ-ವಾಯಿತು. ಐದು ವರ್ಷಗಳ ಕಾಲ ಹಿಪ್ಪರಿಗೆಯ ಸರ್ಕಾರಿ ಶಾಲೆಯಲ್ಲಿ ಲಕ್ಷ್ಯಗೊಟ್ಟು ಅಭ್ಯಾಸ ಮಾಡಿ ಗುರುಗಳ ಮೆಚ್ಚುಗೆಗೆ ಪಾತ್ರರಾದರು.

ಬಾಲಕ ಮಹಾಂತಯ್ಯನಿಗೆ ಹತ್ತು ವರುಷಗಳು ತುಂಬಿದಾಗ, ವಯೋವೃದ್ಧರಾಗಿದ್ದ ಸಂಗನಬಸವಸ್ವಾಮಿಗಳು ಹಿಪ್ಪರಗಿಗ ಆಗಮಿಸಿ ಪಾಲಭಾವಿ ಮಠದಲ್ಲಿಯೇ ಬೆಳ್ಳಂಕಿಮಠದ ಪೂಜ್ಯ ಪಟ್ಟದ್ದೇವರಿಂದ 'ಗುರುದೀಕ್ಷೆ' ಮಾಡಿಸಿದರು. ಮಹಾಂತಯ್ಯ ೧೦ನೆಯ ವಯಸ್ಸಿನಲ್ಲಿಯೇ ಗುರುಮುಟ್ಟಿ ಗುರುವಾದರು.

**ಮುಧೋಳ ಗವಿಮಠದಲ್ಲಿ ಅಧ್ಯಯನ :**

ಕೇವಲ ಹತ್ತು ವರುಷದ ಮಹಾಂತ ಸ್ವಾಮಿಗಳು ಹೆಚ್ಚಿನ ವಿದ್ಯಾಭ್ಯಾಸ ಮಾಡಲೆಂದು ಸವದಿಯ ಅಂದಿನ ಸದ್ಭಕ್ತರೆಲ್ಲ ನಿರ್ಣಯಿಸಿ, ಮುಧೋಳ ಗವಿಮಠದಲ್ಲಿ ಪ್ರಾರಂಭವಾಗಿದ್ದ ಸಂಸ್ಕೃತ ಪಾಠ ಶಾಲೆಯಲ್ಲಿ ಹೆಸರು ದಾಖಲಿಸಿದರು. ಇದರಿಂದ ಸಂಸ್ಕೃತದ ಗ್ರಂಥಗಳ ಅಭ್ಯಾಸಕ್ಕೆ ಅನುಕೂಲವಾಯಿತು. ಆಗ ಮುಧೋಳ ಗವಿಮಠದಲ್ಲಿ ಪೂಜ್ಯರಾದ ಶ್ರೀ **ಮನಿಪ್ರ ಮೃತ್ಯುಂಜಯ ಮಹಾಸ್ವಾಮಿಗಳು** ಮಠಾಧೀಶರಾಗಿದ್ದರು.

ಪೂಜ್ಯರಾದ ಮೃತ್ಯುಂಜಯ ಸ್ವಾಮಿಗಳ ಸಾನಿಧ್ಯದಲ್ಲಿ ಮೂರು ವರುಷಗಳ ಕಾಲವಿದ್ದರು. ಕನ್ನಡ, ಸಂಸ್ಕೃತ, ಹಿಂದಿ, ಇಂಗ್ಲೀಷ ಭಾಷೆಗಳ ಜ್ಞಾನ ಲಭಿಸಿತು. ಕನ್ನಡ ಸಂಸ್ಕೃತ ಕಾವ್ಯಗಳ, ಅಮರಕೋಶ, ಸುಭಾಷಿತಗಳ, ವಚನಗಳ ಅಧ್ಯಯನ-ಚಿಂತನ ನಡೆದು, ಹೆಚ್ಚಿನ ವಿದ್ಯಾಭ್ಯಾಸ ಮಾಡಬೇಕೆಂಬ ಉತ್ಕಟ ಹಂಬಲ ಚಿಗುರೊಡೆದು, ಭಕ್ತರ ಬಯಕೆ-ಪ್ರೋತ್ಸಾಹದಿಂದ ಶಿವಯೋಗ ಮಂದಿರಕ್ಕೆ ಹೋದರು.

**ಶಿವಯೋಗ ಮಂದಿರದಲ್ಲಿ ಬಾಲ ಶಿವಯೋಗಿ :**

ಬಸವಭೂಮಿ ವಿಜಾಪುರ ಜಿಲ್ಲೆಯ ಬದಾಮಿ ತಾಲೂಕಿನಲಿ ಬದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಬನಶಂಕರಿ ಮುಂತಾದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸ್ಥಾನಗಳ ನಡುವೆ ಇರುವ ಕಾಡಿನ ಮಧ್ಯದಲ್ಲಿ ಮಲಪ್ರಭಾ ನದಿಯ ದಡದಲ್ಲಿ ಒಂದು ಸುಂದರವಾದ ಪ್ರಕೃತಿಯ ತಾಣವನ್ನು ಚಿತ್ತರಗಿ ಪೀಠದ ೧೬ನೆಯ ಅಧಿಪತಿಗಳಾದ **ಮಹಾತಪಸ್ವಿ ಪರಮದಾಸೋಹಿ ಶ್ರೀ ವಿಜಯ ಮಹಾಂತ ಶಿವಯೋಗಿಗಳು** ತಮ್ಮ ವಾತ್ಸಲ್ಯದ ಆಕಳು 'ಮಹಾಂತಮ್ಮ' ಳನ್ನು ಕರೆದುಕೊಂಡು ಕುದುರೆಯ ಮೇಲೆ ಸಂಚಾರ ಮಾಡುತ್ತಾ ಬಂದು ತೋರಿದ ಸ್ಥಳವೇ ಇಂದಿನ ಶಿವಯೋಗ ಮಂದಿರ. 'ಶಿವಯೋಗಿಯು ಒಲಿದು ಪಾದವನಿಟ್ಟ ನೆಲವೇ ಸುಕ್ಷೇತ್ರ.

ಜಲವೇ ಪಾವನ ತೀರ್ಥ' ಎಂಬಂತೆ ಚಿತ್ರರಗಿ ಸಂಸ್ಥಾನಮಠ ಇಳಕಲ್ಲದ ಪೂಜ್ಯರು ತೋರಿದ ಈ ಸ್ಥಾನದಲ್ಲಿಯೇ **ಪೂಜ್ಯರಾದ ಹಾನಗಲ್ಲ ಕುಮಾರ ಸ್ವಾಮಿಗಳು** ಶಿವಯೋಗ ಮಂದಿರವನ್ನು ಕಟ್ಟಿದ್ದರು [೧೯೦೯].

ಶಿವಯೋಗ ಮಂದಿರದಲ್ಲಿ ಬಾಲ ಶಿವಯೋಗಿಯಾಗಿ ೧೯೪೪ ರಿಂದ ೧೯೫೨ ವರೆಗೆ ಆರು ವರುಷಗಳ ಕಾಲ ಸಾಧನೆ ಮಾಡಿದರು. ಶಿವಯೋಗ ಮಂದಿರದಲ್ಲಿ ಕುಮಾರ ಸಂಭವ, ರಘುವಂಶ, ಅಭಿಜ್ಞಾನ ಶಾಕುಂತಲ, ಮೃಚ್ಛಕಟಿಕ, ಉತ್ತರರಾಮಚರಿತೆ, ಅಲಂಕಾರಶಾಸ್ತ್ರ, ಲಘುಸಿದ್ಧಾಂತ, ಕೌಮುದಿ ಮೊದಲಾದ ಶಾಸ್ತ್ರಗ್ರಂಥಗಳು, ಅಮರಕೋಶ, ಶಬ್ಧರೂಪಾವಲಿ, ಧಾತೂರೂಪಾವಲಿ ಮುಂತಾದ ಪದಕೋಶ ವ್ಯಾಕರಣ ಗ್ರಂಥಗಳು ಕಲಿಸಲ್ಪಡುತ್ತಿದ್ದವು.

ಶಿವಯೋಗ ಮಂದಿರದ ಶಿಕ್ಷಕವರ್ಗದಲ್ಲಿ ಪಂ.ಬಸವರಾಜ ಶಾಸ್ತ್ರಿಗಳು ಪಗಡದಿನ್ನಿ, ಪಂ.ಕೊಂಗವಾಡ ವೀರಭದ್ರಶಾಸ್ತ್ರಿಗಳು, ಶ್ರೀ ಸದಾಶಿವಸ್ವಾಮಿಗಳು, ಶ್ರೀ ಶಿವಬಸವಸ್ವಾಮಿಗಳು ಹೊಸಮಠ ಹುಬ್ಬಳ್ಳಿ, ಶ್ರೀ ಜಿ.ಎಂ.ಉಮಾಪತಿ ಶಾಸ್ತ್ರಿಗಳು ಮುಂತಾದವರಿದ್ದರು. ಇವರಲ್ಲಿ ಸವದಿಯ ಮಹಾಂತಸ್ವಾಮಿಗಳ ಮೇಲೆ ಗಾಢವಾದ ಪ್ರಭಾವ ಬೀರಿದವರೆಂದರೆ **ಪಗಡದಿನ್ನಿಯ ಪಂ.ಬಸವರಾಜ ಶಾಸ್ತ್ರಿಗಳು.**

ಬೆಳಗಿನ ಜಾ್ನ ಮಲಪ್ರಭಾ ನದಿಯಲ್ಲಿ ಈಜಾಡುವುದು, ಯೋಗಾಸನ ಸಾಧನೆ ಮಾಡುವುದು, ಇಷ್ಟಲಿಂಗ ಯೋಗ, ಧ್ಯಾನ, ಪರಿಸರ ಸ್ವಚ್ಛತೆ, ಅಡಿಗೆ ಮನೆಯಲ್ಲಿ ಸ್ವಯಂಪಾಕ ಪ್ರಸಾದ ಸಿದ್ದತೆ- ಅನಂತರ ಪಾಠ-ಪ್ರವಚನಗಳು, ಹೀಗೆ ಆರು ವರುಷ ಕಳೆದು ಹೋದುದೇ ಗೊತ್ತಾಗಲಿಲ್ಲ. ಬಿಡುವಿನ ವೇಳೆಯಲ್ಲಿ ಶಿವಯೋಗ ಮಂದಿರದ ಮುದ್ರಣಾಲಯದಲ್ಲಿ 'ಸುಕುಮಾರ' ಪತ್ರಿಕೆಯ ಮೊಳೆ ಜೋಡಿಸುವ, ಮುದ್ರಣದ ಕೆಲಸವನ್ನೂ ಕಲಿತರು, ಗೋಶಾಲೆಯಲ್ಲಿ-ವಿಭೂತಿ ನಿರ್ಮಾಣದ ಕಲೆಯನ್ನೂ ಕರಗತ ಮಾಡಿಕೊಂಡರು.

**ಶಿವಯೋಗ ಮಂದಿರದಿಂದ ಕಾಶಿಗೆ** [ಬನಾರಸಕ್ಕೆ] :

ಲಿಂಗವಂತ ಸ್ವಾಮಿಗಳಲ್ಲಿ ೧೯ನೆಯ ಶತಮಾನದ ಕೊನೆಯ ಭಾಗ ಹಾಗೂ ೨೦ನೆಯ ಶತಮಾನದ ಪ್ರಾರಂಭದ ಕಾಲಕ್ಕೆ ಕಾಶಿಗೆ ಹೋಗಿ ಸಂಸ್ಕೃತ ಅಧ್ಯಯನ ಮಾಡಿ 'ಕಾಶಿ ಪಂಡಿತ' ರೆಂದು ಬಿರುದು ಪಡೆದುಕೊಳ್ಳುವ ಪೈಪೋಟಿಯು ಪ್ರಾರಂಭವಾಗಿತ್ತು. ವರ್ಣಾಶ್ರಮಧರ್ಮ ವ್ಯವಸ್ಥೆಯಲ್ಲಿ ಶೂದ್ರಾತಿಶೂದ್ರರೆಂದೆನಿಸಿಕೊಂಡಿದ್ದ ಲಿಂಗಾಯತರು ತಮ್ಮ ಶೂದ್ರತ್ವ ಕಳೆದುಕೊಂಡು ಸವರ್ಣೀಯ ಬ್ರಾಹ್ಮಣರೊಂದಿಗೆ ಪೈಪೋಟಿಗೆ ಬಿದ್ದಂತೆ ಸಂಸ್ಕೃತ ಕಲಿಯಲೇ-ಬೇಕೆಂಬ ಪ್ರತಿಷ್ಠೆಗೆ ಬೆನ್ನು ಬಿದ್ದಿದ್ದ ಕಾಲ.

ಕಾಶಿಯು ಭಾರತದ ಪ್ರಾಚೀನವಾದ ಧಾರ್ಮಿಕ-ಸಾಂಸ್ಕೃತಿಕವಾಗಿ ಪ್ರಸಿದ್ಧಿ ಪಡೆದ ಶೈವಕ್ಷೇತ್ರ, ಇಲ್ಲಿ ಕರ್ನಾಟಕದ ವಟುಗಳು-ಅಧ್ಯಯನಕ್ಕೆ ಬಂದಾಗ ಇರಲು

ಒಂದು 'ಜಂಗಮವಾಡಾ' ಇದೆ. ಇದನ್ನು ಜಂಗಮವಾಡಿಮಠವೆಂದು ಕರೆಯಲಾಗುತ್ತಿದೆ. ಶಿವಯೋಗಮಂದಿರದಲ್ಲಿ ಓದು ಪೂರೈಸಿದ ಮರಿದೇವರುಗಳು ಆರ್ಥಿಕ ಅನುಕೂಲತೆ ಹಾಗೂ ಹೆಚ್ಚಿನ ವಿದ್ಯಾರ್ಜನೆ ಮಾಡಬೇಕೆನ್ನುವವರು ಕಾಶಿಗೆ ಹೋಗುವುದು ವಾಡಿಕೆಯಾಗಿದೆ.

ಪೂಜ್ಯರು ೧೯೫೨ರಲ್ಲಿ ಕಾಶಿಗೆ ಹೋದರು. ಅಲ್ಲಿ ಜಂಗಮವಾಡಿ ಮಠದಲ್ಲಿ ವಾಸ್ತವ್ಯದ ಕೋಣೆ ಹಾಗೂ ಪ್ರಸಾದದ ವ್ಯವಸ್ಥೆಯಾಯಿತು. ಸಸಿವಾಳ ಮಹಾಂತದೇವರ ಸಹಕಾರ–ಸಹಾಯವೂ ದೊರೆಯಿತು. ಸವದಿಯ ಮಹಾಂತಸ್ವಾಮಿಗಳವರಿಗೆ **ಕಾಶಿಯ ಕ್ವೀನ್ಸ್ ಕಾಲೇಜಿನಲ್ಲಿ** ಪ್ರವೇಶ ದೊರೆಯಿತು. ಶಾಸ್ತ್ರೀ ಪದವಿಗಾಗಿ ಅಧ್ಯಯನ ಪ್ರಾರಂಭವಾಯಿತು. ಅಲ್ಲಿ ಆಗಿನ ಕಾಲಕ್ಕೆ ತಿಂಗಳಿಗೆ ೪೦ ರೂ. ವಿದ್ಯಾರ್ಥಿ ವೇತನ [ಸ್ಕಾಲರ್ ಶಿಫ್] ಕೂಡ ಸಿಕ್ಕಿತು. ಗಂಗಾನದಿಯಲ್ಲಿ ಸ್ನಾನ, ಯೋಗಾಸನಗಳ ಸಾಧನೆ, ಪ್ರಭಾತ ಸಮಯದಲ್ಲಿ ಇಷ್ಟಲಿಂಗಾರ್ಚನೆ, ಕಾಲೇಜಿನಲ್ಲಿ ಪಠ್ಯ ಗ್ರಂಥಗಳ ಪಾಠ–ಪ್ರವಚನ, ಬರವಣಿಗೆ ಸಾಗಿತು. ಸಂಜೆಯ ವೇಳೆಯಲ್ಲಿ ಹತ್ತಿರದ ದಶಾಶ್ವಮೇಧ ಘಾಟಿನ ಹತ್ತಿರದ ಶಿವದೇವಾಲಯ ದಲ್ಲಿ ಪುರಾಣ–ಪ್ರವಚನಗಳನ್ನು ಕೇಳುವುದು. ಸಂಸ್ಕೃತದೊಂದಿಗೆ ಹಿಂದಿ ಭಾಷೆಯನ್ನು ಕಲಿಯಲು ಸಾಧ್ಯವಾಯಿತು. ಕಾಶಿಯಲ್ಲಿ **'ಥಿಯಾಸಾಫಿಕಲ್ ಸೊಸೈಟಿ ಆಫ್ ಇಂಡಿಯಾ'** ಎಂಬ ಹೆಸರಿನ 'ಬ್ರಹ್ಮಜ್ಞಾನ ಸಮಾಜ' ಸಂಸ್ಥೆಯ ಸಂಪರ್ಕ ಬಂದಿತು. ಅಲ್ಲಿಯ ಆಧ್ಯಾತ್ಮ, ದೇವರು, ಆತ್ಮ, ಕರ್ಮಸಿದ್ಧಾಂತ, ಪೂರ್ವಜನ್ಮ, ಪುನರ್‌ಜನ್ಮ, ಸಮಾಜ ಸುಧಾರಣೆ ಮುಂತಾದ ಚರ್ಚೆಗಳಲ್ಲಿ ಭಾಗವಹಿಸಿ, ಪ್ರಾಚೀನ ಜ್ಞಾನದ ಪರಿಚಯ ಮಾಡಿಕೊಂಡರು.

ಕಾಶಿಯಲ್ಲಿ ಜಂಗಮವಾಡಿ ಮಠದ ಹತ್ತಿರದಲ್ಲಿಯೇ **'ಗುಪ್ತಾ ಸಂಗೀತ ವಿದ್ಯಾಲಯ'** ಎಂಬ ಹೆಸರಿನ ಸಂಸ್ಥೆಯಿತ್ತು. ಬಾಲ್ಯದಿಂದಲೇ ಸಂಗೀತದ ಒಲವಿದ್ದ ಮಹಾಂತಸ್ವಾಮಿಗಳು ಶ್ರೀ ಗುಪ್ತಾ ಎಂಬ ಸಂಗೀತ ವಿದ್ವಾಂಸರಲ್ಲಿ **ಶಾಸ್ತ್ರೀಯ ಸಂಗೀತ ವಿದ್ಯಾಭ್ಯಾಸವನ್ನೂ** ಮಾಡಿದರು. ಕ್ವೀನ್ಸ್ ಕಾಲೇಜಿನಲ್ಲಿ ಒಂದು ವರ್ಷ ವಿದ್ಯಾಭ್ಯಾಸ ಮುಗಿದು ಪರೀಕ್ಷೆಯನ್ನು ಬರೆದು ಪಾಸಾದರು. ಅದೇ ಸಂದರ್ಭದಲ್ಲಿ ಉತ್ತರ ಕರ್ನಾಟಕವು **ಭೀಕರ ಬರಗಾಲಕ್ಕೆ** ತುತ್ತಾಯಿತು. ಹೊಳೆ–ಹಳ್ಳಗಳೆಲ್ಲ ಬತ್ತಿ ಹೋದವು. ದನ–ಕರುಗಳೆಲ್ಲ ಮೇವು–ನೀರುಗಳಿಲ್ಲದೇ ತತ್ತರಿಸಿದವು. ಬಡರೈತರು ಆಹಾರ–ದವಸ–ಧಾನ್ಯಗಳಿಲ್ಲದೆ ಬಸವಳಿದರು.

ಒಂದು ಸಲ ಸಹಪಾಠಿ ಮರಿದೇವರೊಬ್ಬರು ಕರ್ನಾಟಕಕ್ಕೆ ಹೋಗಿ ಬಂದವರು. ಅಲ್ಲಿಯ ಬರಗಾಲದ ಬವಣೆಯನ್ನು ತಿಳಿಸಿದರು. ಮಾತೃಹೃದಯದ ಮಹಾಂತಸ್ವಾಮಿಗಳು ಮಮ್ಮಲ ಮರುಗಿದರು. ಸವದಿಯ ರೈತಭಕ್ತರ ದಯನೀಯ ಸ್ಥಿತಿ ನೆನೆದು ಕಣ್ಣೀರಿಟ್ಟರು. ಗೆಳೆಯರಿಗೂ ತಿಳಿಸದೇ, ಯಾರಿಗೂ ಹೊರೆಯಾಗ ಬಾರದೆಂದು ನಿರ್ಧರಿಸಿ ಕಾಶಿಯಿಂದ ರೈಲು ಹತ್ತಿ ಬಂದೇ ಬಿಟ್ಟರು.

ಸವದಿ ಮಠಕ್ಕೆ ಬಂದು, ಬಡಭಕ್ತರ ಕಷ್ಟವನ್ನು ಕಣ್ಣಾರೆ ಕಂಡರು, ಇವರ ಸೇವೆಯ ಪದವಿಯು ಮುಂದೆ ಕಾಶಿಯ ಶಾಸ್ತ್ರೀ ಪದವಿ ತುಚ್ಛವೆನಿಸಿತು. ಭಕ್ತರ ಸೇವೆಯೇ ಸ್ವಾಮಿಗಳ ಕಾಯಕ. ಭಕ್ತರೇ ತಾಯಿ-ತಂದೆ, ಭಕ್ತರೇ ಬಂಧು-ಬಳಗ, ಅವರ ಸೇವೆಯೇ ಲಿಂಗಪೂಜೆ ಎಂಬುದನ್ನು ಕೃತಿಗೆ ತಂದರು. ನಾಲ್ಕಾರು ಜನ ಹಿರಿಯ ಭಕ್ತರನ್ನು ಕರೆದುಕೊಂಡು ಸವದಿ ಹಾಗೂ ಸುತ್ತ-ಮುತ್ತಲಿನ ಗ್ರಾಮಗಳಿಗೆಲ್ಲ ಸಂಚರಿಸಿ, ಆರ್ಥಿಕ ಅನುಕೂಲತೆಯ ಜಮೀನ್ದಾರರು, ಶ್ರೀಮಂತ ರೈತರಲ್ಲಿ ಜೋಳಿಗೆ ಹಿಡಿದು ದವಸ-ಧಾನ್ಯ ಸಂಗ್ರಹಿಸಿ ಪ್ರತಿ ಗ್ರಾಮಗಳಲ್ಲಿ ಬಡ ಜನರಿಗಾಗಿ ಗಂಜಿ ಕೇಂದ್ರಗಳನ್ನು, ದನ-ಕರುಗಳಿಗಾಗಿ ಪಶು ಶಾಲೆಗಳನ್ನು ತೆರೆದು ಮೇವು-ನೀರಿನ ವ್ಯವಸ್ಥೆ ಮಾಡಿದರು.

**ಸವದಿಯಿಂದ ಗದಗಿನ ವೀರೇಶ್ವರ ಪುಣ್ಯಾಶ್ರಮಕ್ಕೆ :**

೧೯೫೩ರಲ್ಲಿ ಇಪ್ಪತ್ತೆರಡರ ತರುಣ ಮಹಾಂತಸ್ವಾಮಿಗಳು ಭಕ್ತರು ಎಷ್ಟೇ ಒತ್ತಾಯಿಸಿದರೂ ಕಾಶಿಗೆ ಹೋಗಲು ಇಚ್ಛಿಸದೇ- ಇನ್ನು ಅಲ್ಲಿ ಕಲಿಯುವುದು ಏನೂ ಇಲ್ಲ. ಇಲ್ಲಿ ಸೇವೆ ಮಾಡುವುದು ಅಪಾರವಿದೆ. ನನ್ನನ್ನು ಚರಜಂಗಮವಾಗಿ ಚರಿಸಿ, ಸೇವೆ ಮಾಡಲು ಬಿಡಿ ಎಂದು ಕೇಳಿಕೊಂಡರು. ಭಕ್ತರ ಒಪ್ಪಿಗೆ ಪಡೆದು ಗದಗಿಗೆ ಬಂದರು. ಆಗ ಗದಗಿನಲಿ ಪಂ.ಪುಟ್ಟರಾಜ ಗವಾಯಿಗಳ ವೀರೇಶ್ವರ ಪುಣ್ಯಾಶ್ರಮ ಹಾಗೂ ಶಿವಯೋಗ ಮಂದಿರದಲ್ಲಿದ್ದಾಗ ವಿದ್ಯಾಗುರುಗಳಾಗಿದ್ದ ಹಗಡದಿನ್ನಿಯ ಪಂ.ಬಸವರಾಜ ಶಾಸ್ತ್ರಿಗಳು ಗದಗಿನಲ್ಲಿ ನೆಲೆನಿಂತು ಪಾಠಶಾಲೆ ನಡೆಸುತ್ತಿದ್ದರು. ಈ ಎರಡು ಕಾರಣಗಳಿಂದ ಪೂಜ್ಯ ಮಹಾಂತಸ್ವಾಮಿಗಳು ಗದಗಿಗೆ ಬಂದು, ವೀರೇಶ್ವರ ಪುಣ್ಯಾಶ್ರಮದಲ್ಲಿ ವಾಸ್ತವ್ಯ ಹಾಗೂ ಪ್ರಸಾದ ವ್ಯವಸ್ಥೆ ಮಾಡಿಕೊಂಡರು.

ವೀರೇಶ್ವರ ಪುಣ್ಯಾಶ್ರಮದಲ್ಲಿ **ಶ್ರಿ ಸಿದ್ದರಾಮ ಗವಾಯಿಗಳೆಂಬ** ಸಂಗೀತ ಗುರುಗಳಲ್ಲಿ ಸಂಗೀತಸಾಧನೆಗೆ ತೊಡಗಿಸಿಕೊಂಡರು. ಯಮನ್, ಮಾಲಕಾಂಸ್, ದರ್ಬಾರಿಕಾನಡ, ಕೇದಾರ, ದುರ್ಗಾ, ಭೀಮಪಲಾಸ, ಭೈರವಿ ಮುಂತಾದ ರಾಗಗಳನ್ನು ಸಾಧನೆ ಮಾಡಿ, ಹಾಡುಗಾರಿಕೆಯಲ್ಲಿ ಸಾಮರ್ಥ್ಯಗಳಿಸಿದರು.

ಪೂಜ್ಯರಾದ ಹಗಡದಿನ್ನಿ ಬಸವರಾಜ ಶಾಸ್ತ್ರೀಗಳವರಲ್ಲಿ ಲಿಂಗಾಯತ ಧರ್ಮದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಲಿಂಗಸಕೀಲ, ಕರಣಹಸಿಗೆ, ಲಿಂಗಧಾರಣ ಚಂದ್ರಿಕೆ, ಲಿಂಗಲೀಲಾವಿಲಾಸಚಾರಿತ್ರ್ಯ, ಏಕೋತ್ತರಸ್ಥಲ, ಕ್ರಿಯಾಸಾರ ಮುಂತಾದ ತತ್ವ-ಸಿದ್ಧಾಂತ ಗ್ರಂಥಗಳನ್ನು ಆಳವಾಗಿ ಅಧ್ಯಯನಗೈದರು. ಬಸವಾದಿ ಶರಣರ ವಚನಗಳು. ಚಾಮರಸನ ಪ್ರಭುಲಿಂಗಲೀಲೆ, ಭೀಮಕವಿಯ ಬಸವಪುರಾಣಗಳು ಕರಗತವಾದವು.

**ಮುನವಳ್ಳಿಯ ಜಡೆಸಿದ್ದೇಶ್ವರ ಸ್ವಾಮಿಗಳಿಂದ ಚಿನ್ಮಯಾನುಗ್ರಹ ದೀಕ್ಷೆ :**

ಗದಗಿನಲ್ಲಿರುವಾಗಲೇ ಆಕಸ್ಮಿಕವಾಗಿ ಒಂದು ಘಟನೆ ಜರುಗಿತು. ಮುನವಳ್ಳಿಯ ಶ್ರೀ ಜಡೆಸಿದ್ದೇಶ್ವರ ಸ್ವಾಮಿಗಳವರಿಂದ ಚಿನ್ಮಯಾನುಗ್ರಹ ದೀಕ್ಷೆ ಹೊಂದಲು ಸಸಿವಾಳದ ಶ್ರೀ ಮಹಾಂತರು ಕಾಶಿಯಿಂದ ಆಗಮಿಸಿದರು. ಗದಗಿನಲ್ಲಿದ್ದ ಸವದಿಯ ಮಹಾಂತರ ವ್ಯಕ್ತಿತ್ವ-ಸಾಧನೆ ತಿಳಿದಿದ್ದ ಪೂಜ್ಯ ಜಡೆಸಿದ್ದೇಶ್ವರ ಸ್ವಾಮಿಗಳು ಅವರನ್ನೂ ಕರೆಸಿ ಇಬ್ಬರಿಗೂ ಏಕಕಾಲಕ್ಕೆ 'ಅನುಗ್ರಹ' ದೀಕ್ಷೆ ನೀಡುವುದಾಗಿ ಅಪ್ಪಣೆ ಮಾಡಿದರು.

ಮುನವಳ್ಳಿಯ ಪೂಜ್ಯ ಶ್ರೀ ಜಡೆಸಿದ್ದೇಶ್ವರ ಸ್ವಾಮಿಗಳವರಿಂದ ಸಸಿವಾಳ ಮಹಾಂತರು ಹಾಗೂ ಸವದಿಯ ಮಹಾಂತರು ಏಕಕಾಲಕ್ಕೆ 'ಚಿನ್ಮಯಾನುಗ್ರಹ ದೀಕ್ಷೆ' ಹೊಂದಿದರು. ಸವದಿಯ ಮಹಾಂತರು ಮುನವಳ್ಳಿಯಲ್ಲಿ ಚಿನ್ಮಯಾನು ಗ್ರಹದೀಕ್ಷೆ ಹೊಂದಿ ಮರಳಿ ಗದಗಿಗೆ ಆಗಮಿಸಿ, ವೀರೇಶ್ವರ ಪುಣ್ಯಾಶ್ರಮದ ಪೂಜ್ಯ ಶ್ರೀ ಪಂ. ಪುಟ್ಟರಾಜ ಕವಿ ಗವಾಯಿಗಳಿಗೆ ಕ್ರಿಯಾಮೂರ್ತಿಗಳಾದರು. ಸವದಿಯ ಮಹಾಂತದೇವರು ಈ ದೀಕ್ಷೆಯ ನಂತರ 'ಶ್ರೀ ಮಹಾಂತದೇಶಿಕರು' ಎಂದು ಹೆಸರಾದರು.

**ಪ್ರವಚನ ಕಾಯಕ ಪ್ರಾರಂಭ :**

ಪ್ರವಚನವು ಸತ್ಯ ಶುದ್ಧವಾಗಿದ್ದರೆ ಖಂಡಿತವಾಗಿಯೂ ಅದು ಕಾಯಕವೆನಿಸುತ್ತದೆ. ಪ್ರವಚನಕಾರನು ಕನಕ, ಕಾಮಿನಿ, ಕೀರ್ತಿಗಾಗಿ ಬೆನ್ನು ಹತ್ತಿದರೆ ಕೆಲವೇ ದಿನಗಳಲ್ಲಿ ಆತ ತಾನೂ ಹಾಳಾಗುತ್ತಾನೆ. ಸಮಾಜವನ್ನೂ ಹಾಳು ಮಾಡುತ್ತಾನೆ. ಕೀರ್ತಿಶನಿಯೆಂಬುದು ಆತನ ವ್ಯಕ್ತಿತ್ವವನ್ನೇ ನಾಶಮಾಡುತ್ತದೆ. ಈ ಸತ್ಯವನ್ನರಿತ ಸವದಿಯ ಶ್ರೀ ಮಹಾಂತರು ಕನಕ-ಕಾಮಿನಿ-ಕೀರ್ತಿಗಳಿಗೆ ಮಾರು ಹೋಗದೆ ತಮ್ಮ ಆತ್ಮಕಲ್ಯಾಣ ಹಾಗೂ ಭಕ್ತರ ಕಲ್ಯಾಣಕ್ಕಾಗಿ ಪ್ರವಚನವನ್ನು ಜಂಗಮಕಾಯಕವಾಗಿ ಕೈಕೊಂಡರು. ತಮ್ಮ ಚಾರಿತ್ರ್ಯವನ್ನು ಪರಿಶುದ್ಧವಾಗಿರಿಸಿ ಕೊಂಡು ಮುನ್ನಡೆದರು.

**ಗದುಗಿನಿಂದ ನವಿಲುಗುಂದ ಗವಿಮಠಕ್ಕೆ :**

ನವಿಲುಗುಂದ ಗವಿಮಠದ ಪೂಜ್ಯ ಶ್ರೀ ಮನಿಪ್ರ ಬಸವಲಿಂಗ ಮಹಾಸ್ವಾಮಿಗಳು ಆ ಕಾಲದ ಹಿರಿಯ ಪೂಜ್ಯರಾಗಿದ್ದರು. ಅಲ್ಲಿ ಬಸವಾದಿ ಶರಣರ, ತೋಂಟದ ಸಿದ್ದಲಿಂಗ ಶಿವಯೋಗಿಗಳ ವಚನಗಳ, ಶರಣ-ಸಂಸ್ಕೃತಿ ಕುರಿತು ಆಗಾಗ ವಿಶೇಷ ಕಾರ್ಯಕ್ರಮಗಳು ನಡೆಯುತ್ತಿದ್ದವು. ಪೂಜ್ಯರು ಒಂದು ಸಲ ತಮ್ಮ ಆರೋಗ್ಯ ತಪಾಸಣೆಗೆಂದು ಗದಗಿಗೆ ಬಂದು, ಅಲ್ಲಿ ಭಕ್ತರೊಬ್ಬರ ಮನೆಯಲ್ಲಿ ಪೂಜೆ-ಪ್ರಸಾದಕ್ಕಾಗಿ ಉಳಿದುಕೊಂಡಿದ್ದರು. ಅವರ ದರ್ಶನಕ್ಕಾಗಿ ವೀರೇಶ್ವರ ಪುಣ್ಯಾಶ್ರಮದ ಪಂ. ಪುಟ್ಟರಾಜ ಗವಾಯಿಗಳು ಹೋಗುವಾಗ

ತಮ್ಮೊಂದಿಗೆ ಶ್ರೀ ಮಹಾಂತದೇಶಿಕರನ್ನೂ ಕರೆದೊಯ್ದರು. ನವಲಗುಂದ ಶ್ರೀಗಳವರಿಗೆ ಶ್ರೀ ಪುಟ್ಟರಾಜ ಗವಾಯಿಗಳು ಶ್ರೀ ಮಹಾಂತದೇಶಿಕರ ಪರಿಚಯ ಮಾಡಿಸಿ, ಅವರ ಸಾತ್ವಿಕ ಜೀವನ, ಸಾಧನೆಯನ್ನು ತಿಳಿಸಿದಾಗ ಅನಂದಿತರಾದ ಪೂಜ್ಯ ಬಸವಲಿಂಗ ಸ್ವಾಮಿಗಳು–ನೀವು ಯಾವುದಾದರೂ ಮಠಕ್ಕೆ ಸ್ವಾಮಿಗಳಾಗ–ಬಯಸುವಿರಾ ? ಎಂದು ಕೇಳಿದರು.

ಆಗ ಶ್ರೀ ಮಹಾಂತದೇಶಿಕರು ಸದುವಿನಯದಿಂದ ನುಡಿದ ಮಾತುಗಳು "ನನಗೆ ಯಾವ ಪೀಠ–ಮಠಕ್ಕೂ ಸ್ವಾಮಿಯಾಗುವ ಆಶೆ ಇಲ್ಲ. ಮಠಕ್ಕೆ ಸ್ವಾಮಿಯಾಗುವದಕ್ಕಿಂತ ಬಸವಧರ್ಮ ಪ್ರಸಾರ ಮಾಡುತ್ತಾ ಚರಜಂಗಮವಾಗಿ ಧರ್ಮ ಪ್ರಸಾರ ಮಾಡುವುದೇ ನನ್ನ ಧ್ಯೇಯವಾಗಿದೆ" ಎಂದು ಹೇಳಿದರು.

ಶ್ರೀ ಮಹಾಂತದೇಶಿಕರ ದೃಢವಾದ ನುಡಿಗಳನ್ನು ಆಲಿಸಿದ ಶ್ರೀ ಬಸವಲಿಂಗ ಸ್ವಾಮಿಗಳು ಮನದಲ್ಲಿ ಏನೇನೋ ನಿರ್ಧರಿಸಿ, ತಮ್ಮ ಗವಿಮಠಕ್ಕೊಮ್ಮೆ ಪ್ರವಚನಕ್ಕೆ ಆಗಮಿಸಬೇಕೆಂದು ತಿಳಿಸಿ ಹೋದರು.

ಮಹಾಂತದೇಶಿಕರು ಗದಗಿನ ಶ್ರೀ ಪುಟ್ಟರಾಜ ಗವಾಯಿಗಳವರ ಹಾಗೂ ಪಂ. ಬಸವರಾಜ ಶಾಸ್ತ್ರೀಗಳವರ ಒಪ್ಪಿಗೆ ಪಡೆದು ನವಲಗುಂದ ಗವಿಮಠಕ್ಕೆ ಆಗಮಿಸಿದರು. ನವಿಲಗುಂದ ಗವಿಮಠಕ್ಕೆ ಹೊಸ ಕಳೆ ಬಂದಂತಾಯಿತು. ಎಲ್ಲೆಡೆ ಪ್ರಭುಲಿಂಗ ಲೀಲೆ, ಬಸವಪುರಾಣ, ಸಿದ್ದಲಿಂಗೇಶ್ವರ ಪುರಾಣ ಪ್ರವಚನಗಳು ನಡೆಯತೊಡಗಿದವು. ನವಲಗುಂದ ಗವಿಮಠ ಭಕ್ತರಿಂದ ತುಂಬಿ ತುಳುಕಿತು. ಆಗ ಪೂಜ್ಯ ಬಸವಲಿಂಗ ಸ್ವಾಮಿಗಳು– "ನೀವು ಪಾದಯಾತ್ರೆಯ ಮೂಲಕ ಹಳ್ಳಿ ಹಳ್ಳಿಗಳಿಗೆ ಸಂಚರಿಸುತ್ತಾ ಪ್ರವಚನ ಕಾಯಕ–ಧರ್ಮ ಪ್ರಸಾರ ಪ್ರಾರಂಭಿಸಿರಿ" ಎಂದು ಅಪ್ಪಣೆ ಮಾಡಿದರು.

**ಪೂಜ್ಯ ಮಹಾಂತದೇಶಿಕರ ಬಸವಸಂದೇಶ ಪಾದಯಾತ್ರೆ :**

ಸವದಿಯ ಮಹಾಂತದೇಶಿಕರು ಲೋಕಾನುಭವದೊಂದಿಗೆ ಶಿವಾನುಭವ ಮಾಡುತ್ತಾ, ಹಳ್ಳಿ ಹಳ್ಳಿಗಳನ್ನು ಚರಜಂಗಮವಾಗಿ ಬಸವಸಂದೇಶ ಸಾರಲು ಪಾದಯಾತ್ರೆ ಕೈಕೊಂಡರು. ಮಹಾಜ್ಞಾನಿಯಾಗಬೇಕಾದರೆ **'ಕೋಶವನ್ನಾದರೂ ಓದು, ದೇಶವನ್ನಾದರೂ ಸುತ್ತು'** ಎಂಬ ಗಾದೆಯ ಮಾತಿನಂತೆ ಹೊರಟರು. ಈಗಾಗಲೇ ಹಿಪ್ಪರಗಿ, ಸವದಿ, ಮುಧೋಳ, ಶಿವಯೋಗಮಂದಿರ, ಕಾಶಿ, ಗದಗ ಮುಂತಾದ ಕ್ಷೇತ್ರಗಳಲ್ಲಿ ಶ್ರದ್ಧೆಯಿಂದ ಓದಿ ಜ್ಞಾನಿಯಾಗಿದ್ದರು. ಈಗ ಲೋಕಸಂಚಾರಗೈಯುತ್ತ ದೇಶ ಸುತ್ತುತ್ತಾ ಅನುಭವಜ್ಞಾನ ಪಡೆಯುತ್ತಾ ಮಹಾಜ್ಞಾನಿಯಾಗತೊಡಗಿದರು. ನವಲಗುಂದದಿಂದ ಪಾದಯಾತ್ರೆ ಹೊರಡುವಾಗ ಈ ಸಮಾರಂಭದ ಉದ್ಘಾಟನೆಗೆ ಶರಣಜೀವಿಗಳಾದ ಮಾನ್ಯ ಶ್ರೀ ಬಿ.ಡಿ.ಜತ್ತಿಯುವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಪೂಜ್ಯರಿಗೆ ಅವರು ಶುಭ ಹಾರೈಸಿದ್ದರು. ಸಾವಿರಾರು ಭಕ್ತರು ಜಯಘೋಷದೊಂದಿಗೆ ಬೀಳ್ಕೊಟ್ಟಿದ್ದರು.

**ನವಲಗುಂದದಿಂದ ಸವದಿಯ ಮಠಕ್ಕೆ :**

೧೯೫೫ ರಿಂದ ೧೯೬೦ ವರೆಗೆ ನವಲಗುಂದ ಕೇಂದ್ರವಾಗಿಟ್ಟುಕೊಂಡು ಇಡೀ ನಾಡಿನುದ್ದಗಲಕ್ಕೂ ಪ್ರವಚನ, ಪಾದಯಾತ್ರೆ ಮಾಡುತ್ತಾ ಶರಣರ ಸಂದೇಶ ಬಿತ್ತರಿಸುತ್ತಾ ಸಾಗಿದ ಮಹಾಂತದೇಶಿಕರನ್ನು ಸವದಿಯ ಭಕ್ತರು ತಮ್ಮ ಮಠದ ದೇವರನ್ನು ಸವದಿಗೆ ಕರೆದೊಯ್ದರು. ಈಗ ಸವದಿಯ ಭಕ್ತರ ಹೃದಯಸಂಪತ್ತು ಮಹಾಂತರ ಅನುಭಾವದಿಂದ ವೃದ್ಧಿಸಿತು. ಸವದಿಯನ್ನು ಕೇಂದ್ರವಾಗಿಸಿಕೊಂಡು ಅಥಣಿ ಹಾಗೂ ಜಮಖಂಡಿ ತಾಲೂಕುಗಳ ಬಹುತೇಕ ಹಳ್ಳಿಗಳಲ್ಲಿ ಪ್ರವಚನ ಮಾಡುತ್ತಾ ಭಕ್ತರ ಉದ್ಧಾರಕ್ಕಾಗಿ ಶ್ರಮಿಸತೊಡಗಿದರು.

**ಸವದಿಮಠಕ್ಕೆ ಪಟ್ಟಾಭಿಷೇಕ [೧೩-೧೨-೧೯೬೧] :**

ಸವದಿಯ ಸಮಸ್ತ ಸದ್ಭಕ್ತರು ತಮ್ಮೂರಿನ ವಿರಕ್ತಮಠದ ಪೂಜ್ಯ ಶ್ರೀ ಮಹಾಂತದೇಶಿಕರ ನಿರಂಜನ ಸ್ಥಿರ-ಚರ ಪಟ್ಟಾಧಿಕಾರ ಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲು ನಿರ್ಧರಿಸಿ, ದೇಣಿಗೆ ಸಂಗ್ರಹಕ್ಕೆ ತೊಡಗಿದರು. ಕೆಲವೇ ದಿನಗಳಲ್ಲಿ ೪೦ ಸಾವಿರ ಮೇಲ್ಪಟ್ಟು ಹಣ ಸಂಗ್ರಹವಾಯಿತು. ಪಟ್ಟಾಧಿಕಾರ ಮಹೋತ್ಸವಕ್ಕೆ ಮುಂಚೆ ಒಂದು ತಿಂಗಳ ಕಾಲ ಖ್ಯಾತ ಪ್ರವಚನಕಾರರಾದ **ಪಂ. ಬಸವರಾಜ ಶಾಸ್ತ್ರಿಗಳು ತಾಳಕೇರಿ** ಅವರನ್ನು ಕೀರ್ತನಕ್ಕೆ ಕರೆಸಿದರು.

೧೯೬೧ ನೆಯ ಇಸ್ವಿಯ ಡಿಸೆಂಬರ ೧೩ ರಂದು ಸುಪ್ರಭಾತ ಸಮಯದಲ್ಲಿ ಪೂಜ್ಯ ಶ್ರೀ ಮನಿಪ್ರ ಬಸವಲಿಂಗ ಮಹಾಸ್ವಾಮಿಗಳು ಗವಿಮಠ ನವಲಗುಂದ ಅವರ ಲಿಂಗ ಹಸ್ತದಿಂದಲೇ ಪೂಜ್ಯರಾದ ಸವದಿಯ ಶ್ರೀ ಮಹಾಂತದೇಶಿಕರಿಗೆ ನಿರಂಜನ ಜಂಗಮಸ್ಥಲವಿತ್ತು ಅನುಗ್ರಹ ಮಾಡಿದರು. ಈಗ ಪೂಜ್ಯಶ್ರೀ ಮಹಾಂತದೇಶಿಕರು- **ಪೂಜ್ಯ ಶ್ರೀ ಮನಿಪ್ರ ಮಹಾಂತಸ್ವಾಮಿಗಳು** ಎಂಬ ಹೊಸ ಹೆಸರು ಹೊಂದಿದರು. ಗುರು ಮುಟ್ಟಿ ಗುರುವಾದರು, ಜ್ಯೋತಿ ಮುಟ್ಟಿ ಜ್ಯೋತಿಯಾದರು, **ಸವದಿ ಮಠದ ೫ ನೆಯ ಗುರುವಾದರು.**

**ಕೃಷ್ಣಾನದಿಯ ದಡದಲ್ಲಿ ಇಷ್ಟಲಿಂಗ ಪೂಜಾನುಷ್ಠಾನ :**

ಪೂಜ್ಯ ಶ್ರೀ ಮನಿಪ್ರ ಮಹಾಂತಸ್ವಾಮಿಗಳವರು 'ಇಷ್ಟಲಿಂಗ ಪೂಜಾನುಷ್ಠಾನ-ವಚನಾಧ್ಯಯನ' ಕ್ಕೆ ನಿರ್ಧರಿಸಿದ ಪ್ರಕಾರ ಸವದಿಯ ಭಕ್ತರೆಲ್ಲ ಕೂಡಿ, ಊರಿಂದ ಎರಡು ಕಿ.ಮೀ. ದೂರದ ಶ್ರೀ ಮಾಯಪ್ಪನವರ ಗಡ್ಡಿಯಲ್ಲಿ ಒಂದು ಸ್ಥಳವನ್ನು ಆಯ್ಕೆ ಮಾಡಿದರು. ಅಲ್ಲಿ ೬ ಘೂಟು ಅಗೆದು ೧೦ ಘೂಟು ಉದ್ದ ಅಗಲ ಸುಂದರ ಗವಿ ನಿರ್ಮಿಸಿ ಅದರ ಮೇಲೆ ಸುತ್ತಲೂ ಬಿದಿರು-ಬೆತ್ತಗಳ ತಟ್ಟಿ ಹೆಣೆದು ಮೇಲ್ಚಾವಣಿಗೆಗೆ ಹೊಸ ತಗಡಗಳನ್ನು ತಂದು ಹೊದಿಸಿ, ಹೊಸದಾದ ಲಿಂಗಪೂಜಾ ಗುಹೆ-ಮಂಟಪವನ್ನು ಸಿದ್ದಗೊಳಿಸಿದರು. ಪೂಜ್ಯರು ಭಕ್ತರೊಂದಿಗೆ ಆಗಮಿಸಿ, ಒಂದು ದಿನ ಸುಪ್ರಭಾತ ಸಮಯದಲ್ಲಿ ಅನುಷ್ಠಾನ ಪ್ರಾರಂಭಿಸಿದರು.

ಮೂರುವರೆ ತಿಂಗಳ ಈ ಅನುಷ್ಠಾನದಲ್ಲಿ ಪೂಜ್ಯರು ಎಂದೆಂದಿಗೂ ಸವೆಯದ, ನಾಶವಾಗದ, ಯಾರೂ ಕದಿಯದ, ಅಮೂಲ್ಯವಾದ ಅಂತರಂಗದ ಅನುಭಾವ ಸಂಪತ್ತನ್ನು ಗಳಿಸಿಕೊಂಡರು. 'ಅರಿವೇ ಗುರು, ಆಚಾರವೇ ಲಿಂಗ, ಅನುಭಾವವೇ ಜಂಗಮ' ಎಂಬ ಬಸವ ಸಿದ್ಧಾಂತವನ್ನು ಸಾಧಿಸಿಕೊಂಡರು.

**ಬಸವತತ್ವ ಪ್ರಸಾರದ ಜಂಗಮ ಕಾಯಕ ಪ್ರಾರಂಭ :**

೧೯೬೨ರ ಬಸವ ಜಯಂತಿಯೊಂದಿಗೆ ಬಸವತತ್ವ ಪ್ರಸಾರದ ಮಹಾಮಣಿಹ ಪೂರೈಸಲು ಸವದಿ ಮಠದ ಪೂಜ್ಯ ಮಹಾಂತ ಸ್ವಾಮಿಗಳು ಕಟಿಬದ್ಧರಾದರು. ಬಾಲ್ಯದಿಂದಲೇ 'ಜಂಗಮ' ಕರ್ತವ್ಯಗಳನ್ನರಿತ ಪೂಜ್ಯ ಮಹಾಂತ ಸ್ವಾಮಿಗಳು ಜನ-ಮನದ ಅಜ್ಞಾನ ಕತ್ತಲೆ ಕಳೆಯಲೋಸುಗ ಸುಜ್ಞಾನ ಜಂಗಮವಾಗಿ ನಾಡಿನಾದ್ಯಂತ ಪ್ರವಚನ ಕಾಯಕದಲ್ಲಿ ನಿರತರಾದರು.

೧೯೬೧ ರಿಂದ ೧೯೭೦ ರ ವರೆಗೆ ಹತ್ತು ವರುಷಗಳ ಕಾಲ ಪೂಜ್ಯ ಮಹಾಂತಪ್ಪಗಳು ಬಸವ ಪುರಾಣ, ಪ್ರಭುಲಿಂಗ ಲೀಲೆ, ಸಿದ್ದಲಿಂಗೇಶ್ವರ ಪುರಾಣ ಪ್ರವಚನ ಮಾಡುತ್ತಾ, ಬಸವಾದಿ ಶರಣರ ವಚನಗಳನ್ನು ಸಂದರ್ಭೋಚಿತವಾಗಿ ಅನುಭಾವದಲ್ಲಿ ಬಳಸಿಕೊಳ್ಳುತ್ತಿದ್ದರು. ತಂಬೂರಿ ಮೀಂಟುತ್ತಾ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಕಂಚಿನಕಂಠದ ಪೂಜ್ಯ ಸವದಿಯ ಮಹಾಂತ ಸ್ವಾಮಿಗಳವರ ಪ್ರವಚನಕ್ಕೆ ಜನರು ಜೇನ್ನೊಣಗಳಂತೆ ಮುಕುರುತ್ತಿದ್ದರು. ಪ್ರತಿ ಊರಲ್ಲಿ ನೂರಾರು ಜನ ಸ್ತ್ರೀ-ಪುರುಷರು, ಮಕ್ಕಳಾದಿಯಾಗಿ ಪೂಜ್ಯರಿಂದ ಇಷ್ಟಲಿಂಗ ಸಂಸ್ಕಾರ ಪಡೆಯುತ್ತಿದ್ದರು.

**ಬಾಗಲಕೋಟೆಯಲ್ಲಿ ಬಸವ ಪುರಾಣ ಪ್ರವಚನ :**

ಪೂಜ್ಯ ಸವದಿಯ ಮಹಾಂತ ಸ್ವಾಮಿಗಳು ೧೯೬೮ ರಲ್ಲಿ ಬಾಗಲಕೋಟೆಗೆ ಬಸವ ಪುರಾಣ ಪ್ರವಚನಕ್ಕೆ ದಯಮಾಡಿಸಿದರು. ಅಖಂಡ ೫೦ ದಿನಗಳ ಕಾಲ, ಬಾಗಲಕೋಟೆಯ ಶಿವಾನಂದ ಜೀನ್‌ದಲ್ಲಿ ನಡೆದ ಪ್ರವಚನದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಸುಸಂಸ್ಕೃತ-ಸುಶಿಕ್ಷಿತ ಭಕ್ತರು, ಅಕ್ಕನ ಬಳಗದ ತಾಯಂದಿರು, ಬಸವೇಶ್ವರ ಸಂಘದ ಶಿಕ್ಷಕರು-ವಿದ್ಯಾರ್ಥಿಗಳು ಅಪಾರ ಸಂಖ್ಯೆಯಲ್ಲಿ ನೆರೆದು ಪ್ರವಚನದ ವಚನಾಮೃತವನ್ನು ಸವಿದು ಪುನೀತರಾದರು.

ಬಸವ ಪುರಾಣ ಮಂಗಲದ ದಿನ ಬೆಳಿಗ್ಗೆ ಸಾಮೂಹಿಕ ಇಷ್ಟಲಿಂಗ ಪೂಜೆ ಹಾಗೂ ೫೦೦ ಜನರಿಗೆ ಇಷ್ಟಲಿಂಗಧಾರಣ ಹಾಗೂ ದೀಕ್ಷಾ ಸಂಸ್ಕಾರ ಕಾರ್ಯಕ್ರಮ ಜರುಗಿತು. ಅನಂತರ ಆನೆಯ ಅಂಬಾರಿಯ ಮೇಲೆ ಧರ್ಮಗುರು ಬಸವಣ್ಣನವರ ಭಾವಚಿತ್ರ ಹಾಗೂ ಬಸವಪುರಾಣದ ಭವ್ಯವಾದ ಮೆರವಣಿಗೆಯು ಬಾಗಲಕೋಟೆಯ ಬೀದಿ ಬೀದಿಗಳಲ್ಲಿ ಜರುಗಿತು. ನಗರದ ತುಂಬಾ ಬಸವ ಮಂತ್ರದ ಜಯಘೋಷ, ಬಸವ ವಾತಾವರಣ ಸೃಷ್ಟಿಯಾಯಿತು. ಮಧ್ಯಾಹ್ನದಿಂದ

ಸಂಜೆಯವರೆಗೂ ಬಸವ ಮಹಾಪ್ರಸಾದ ಆರೋಗಣೆ ನಡೆಯಿತು. ಸಹಸ್ರ ಸಹಸ್ರ ಭಕ್ತರು ಪ್ರಸಾದ ಸ್ವೀಕರಿಸಿ ಧನ್ಯರಾದರು.

**ಸವದಿ ಮಠದ ಪುನರ್ ನಿರ್ಮಾಣ :**

ಸವದಿಯ ಮುಗ್ಧ ಭಕ್ತರು ಹಾಗೂ ನೆರೆಹೊರೆಯ ಗ್ರಾಮದ ಭಕ್ತರು ನಾ ಮುಂದೆ, ತಾ ಮುಂದೆ ಎಂಬಂತೆ ಹಣ ಸಂಗ್ರಹ ಮಾಡಿದರು. ಎಲ್ಲ ಜಾತಿ-ಮತಿ-ಪಂಥಗಳವರು ಶ್ರಮದಾನ ಮಾಡಿದರು. ೧೯೭೦ರಲ್ಲಿ ಸವದಿ ಶ್ರೀ ಮಠದ ನೂತನ ಕಟ್ಟಡ ನಿರ್ಮಾಣವಾಯಿತು.

**ಸವದಿ ವಿರಕ್ತಮಠದಿಂದ ಚಿತ್ತರಗಿ ಪೀಠಕ್ಕೆ :**

ಚಿತ್ತರಗಿ ಪೀಠದ ಭಕ್ತರ ಅಪೇಕ್ಷೆಯಂತೆ ೧೯೭೦ರ ಮೇ ೧೭ ರಂದು ಸವದಿಯ ಪೂಜ್ಯ ಮಹಾಂತಸ್ವಾಮಿಗಳು ಚಿತ್ತರಗಿ ಸಂಸ್ಥಾನ ಮಠ ಇಳಕಲ್ಲಕ್ಕೆ ೧೯ ನೆಯ ಚಿತ್ತರಗಿ ಪೀಠದ ಅಧಿಪತಿಗಳಾಗಿ ಪಟ್ಟಾಭಿಷಕ್ತರಾದರು. ಸವದಿ ಮಠದೊಂದಿಗೆ ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೂ ಸ್ವಾಮಿಗಳಾಗಿ ಕಾರ್ಯ ನಿರ್ವಹಿಸಿದರು.

## ಭಾಗ-೨

**ಚಿತ್ತರಗಿ ಪೀಠ : ಪಟ್ಟಗಳು-ಪರಂಪರೆ :**

ಬಸವ ಪರಂಪರೆಯ ಅನುಭವಮಂಟಪದ ಶೂನ್ಯ ಸಿಂಹಾಸನ ಶೂನ್ಯ ಪೀಠದ ಪರಂಪರೆಯು ಅಲ್ಲಮ ಪ್ರಭು, ಚನ್ನಬಸವಣ್ಣ, ಸಿದ್ದರಾಮರ ನಂತರ ಹದಿನೈದನೆಯ ಶತಮಾನದವರೆಗೆ ಅಜ್ಞಾತವಾಗಿ ಉಳಿದಿದೆ. ಕಲ್ಯಾಣದ ನಿರಂಜನ ಜಂಗಮವಿಭು ಅಲ್ಲಮ ಪ್ರಭು ದೇವರು ಬಸವತತ್ವ ಪ್ರಸಾರಾರ್ಥವಾಗಿ ಅನುಭವ ಮಂಟಪದಿಂದ ಚರಜಂಗಮವಾಗಿ ಸಂಚರಿಸುತ್ತಾ ಚಿತ್ತರಗಿಗೆ ಬಂದು ಅಲ್ಲಿ ಕೆಲ ಕಾಲವಿದ್ದು, ಶಿವಾನುಭ ನಡೆಸಿ, ಚಿತ್ತರಗಿಯಿಂದ ಮುಂದೆ ಬಿಜಯಂಗೈಯಬೇಕಾಗಿ ಬಂದಾಗ, ಸದ್ಭಕ್ತರ ಅಪೇಕ್ಷೆಯಂತೆ ತಮ್ಮ ಚರ ಜಂಗಮ ಅನುಯಾಯಿ-ಗಳಲ್ಲೊಬ್ಬರಾದ **"ವಿಜಯ ಮಹಾಂತ ಶರಣ"** ರನ್ನು ಅಲ್ಲಿಯೇ ಉಳಿಸಿ ಹೋದರು. ಅವರಿಂದಲೇ ಚಿತ್ತರಗಿ ಪೀಠ ಪರಂಪರೆಯು ಪ್ರಾರಂಭವಾಯಿತೆಂದು ಹೇಳಲಾಗುತ್ತಿದೆ. ಆದ್ದರಿಂದಲೇ 'ಶರಣ ಸ್ಥಲ ಪೀಠ' ವಾಗಿದೆ. ಚಿತ್ತರಗಿ ಪೀಠದ ಹಿರಿಮೆಯನ್ನು ಉಗ್ಘಡಿಸುವಾಗ- "ಶ್ರೀಮತ್ ಸಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ಶ್ರೀಮದ್ ಅಲ್ಲಮ ಪ್ರಭುವಿನ ಸಾಂಪ್ರದಾಯಕರಾದಂತಹ ಚಿತ್ತರಗಿ ಶಿವಾನುಭವ ಚರವರ್ಯ ಶ್ರೀ ವಿಜಯ ಮಹಾಂತ ಸ್ವಾಮಿಗಳು" ಎಂಬ ಒಕ್ಕಣೆ ಇರುವುದು ತಿಳಿದು ಬರುತ್ತದೆ.

ಹನ್ನೆರಡನೆಯ ಶತಮಾನದ ತರುವಾಯ ಅಂದಾಜು ಮೂನ್ನೂರು ವರುಷಗಳ ನಂತರ ೧೫ ನೆಯ ಶತಮಾನದ ವಿಜಯನಗರ ಸಾಮ್ರಾಜ್ಯ ಪ್ರೌಢದೇವರಾಯನ ಕಾಲವು ಲಿಂಗಾಯತ ಧರ್ಮೇತಿಹಾಸದ ಪುನರುಜ್ಜೀವನ ಯುಗವೆಂದು ಪ್ರಸಿದ್ಧಿ ಪಡೆದಿದೆ. ಈ ಕಾಲದಲ್ಲಿ ನೂರೊಂದು ವಿರಕ್ತರು ಸಂಘಟಿತರಾಗಿ ಬಸವಪ್ರಣೀತ ಲಿಂಗವಂತ ಧರ್ಮ-ಸಂಸ್ಕೃತಿ-ಬಸವತತ್ವ ಪ್ರಸಾರದ ಮಹಾಮಣಿಹ ಪೂರೈಸಲೋಸುಗ ಶ್ರಮಿಸಿದರು. ಅದೇ ಕಾಲಕ್ಕೆ ತೋಂಟದ ಸಿದ್ದಲಿಂಗ ಶಿವಯೋಗಿಗಳು ಚರಜಂಗಮವಾಗಿ ತಮ್ಮ ೭೦೧ ವಿರಕ್ತರೊಂದಿಗೆ ನಾಡನ್ನೆಲ್ಲಾ ಸುತ್ತಿ ಬಸವ ಪರಂಪರೆಯ ಮಠ-ಪೀಠಗಳನ್ನು ಹುಟ್ಟು ಹಾಕಿದರು. ಅವರ ಶಿಷ್ಯ ಪರಂಪರೆಯ **'ಚೀಲಾಳ ಸಮಯ'** ಕ್ಕೆ ಚಿತ್ತರಗಿ ಪೀಠವು ಸೇರಿದ್ದಾಗಿದೆಯೆಂದು ವಿದ್ವಾಂಸರ ಸಂಶೋಧಕರ ಅಭಿಪ್ರಾಯವಾಗಿದೆ.

ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಶ್ರೀಮಠವು ಬಸವತತ್ವ ಪ್ರಸಾರದ ಮುಖ್ಯ ಕೇಂದ್ರ ಮಠವಾಗಿ ಬೆಳೆದುಬಂದಿರುವುದನ್ನು ಕಾಣುತ್ತೇವೆ. ತೋಂಟದ ಸಿದ್ದಲಿಂಗ ಶಿವಯೋಗಿಗಳ ಶಿಷ್ಯರಲ್ಲೊಬ್ಬರಾದ ಶ್ರೀ ವಿಜಯ ಮಹಾಂತ ಸ್ವಾಮಿಗಳು ಮೂಲ ಗುರುಗಳಾಗಿದ್ದು ಅಂದಿನಿಂದ ಚಿತ್ತರಗಿ ಪೀಠ ಪರಂಪರೆಯ ಇತಿಹಾಸ ಹಾಗೂ ಪೀಠಾಧಿಪತಿಗಳ ವಿವರವು ನಮಗೆ [೧೫ನೆಯ ಶತಮಾನದಿಂದ] ಇಂದಿನವರೆಗೆ ಲಭ್ಯವಿದೆ.

ಚಿತ್ತರಗಿ ಸಂಸ್ಥಾನ ಮಠಗಳ ಪರಂಪರೆಯ ಹಿರಿಮೆ-ಗರಿಮೆ ಉಗ್ಘಡಿಸುವಾಗ ಕೆಳಗಿನಂತೆ ಘೋಷಣೆ ಮಾಡಲಾಗುತ್ತದೆ.

"ಶ್ರೀಮನ್ನಿರಾಭಾರಿ ದೇಶಿಕ ವರೇಣ್ಯಾನಾಂ ಪಿಂಡಾದಿಜ್ಞಾನ ಶೂನ್ಯಾಂತ-ವಾದ ಏಕೋತ್ತರ ಷಟ್‌ಸ್ಥಲ ಸ್ಥಾಪನಾಚಾರ್ಯ ಚಿನ್ಮೂಲಾದ್ರಿವಾಸ ಚಿತ್ತಸಿಂಹಾಸನಾಧಿಕಾರಿಗಳಾದ ಚಿತ್ತರಗಿ ಶಿವಾನುಭವ ಚರಾಧ್ಯಕ್ಷರಾದಂಥ ಶ್ರೀ ಶ್ರೀ ಶ್ರೀ ವಿಜಯ ಮಹಾಂತ ಸ್ವಾಮಿಗಳು."

ಹಳ್ಳಿಯ ಮುಗ್ಧ ಭಕ್ತಿಯ ಜನರು ತಮ್ಮ ಪೀಠದ ಸ್ವಾಮಿಗಳ ಬಗ್ಗೆ ಸ್ವಾಭಿಮಾನದಿಂದ ಉದ್‌ಘೋಷಿಸುವ ಮಾತು ಹೀಗಿದೆ-

"ಚಿತ್ತರಗಿ ದೊರೆಯೆ ನಿನಗಾರು ಸರಿಯೇ ? ಸರಿ ಎಂಬುವರ ಕೈ ಕಾಲು ಮುರಿಯೆ !"

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಇಳಕಲ್ಲದ ಪಟ್ಟಾಧಿಕಾರ ಹೊಂದಿದ ಮಠಾಧಿಪತಿಗುರುಗಳ ವಿವರ ಕೆಳಗಿನಂತಿದೆ :

**ಶಿವಾನುಭವ ಚರವರ್ಯರಾದ-**

೧. ಶ್ರೀ ವಿಜಯ ಮಹಾಂತ ಸ್ವಾಮಿಗಳು [೧೫ನೆಯ ಶತಮಾನ]
೨. ಶ್ರೀ ರೇವಣಸಿದ್ಧ ಸ್ವಾಮಿಗಳು [೧೫ನೆಯ ಶತಮಾನ]
೩. ಶ್ರೀ ಶಿವಲಿಂಗ ಸ್ವಾಮಿಗಳು [೧೬ನೆಯ ಶತಮಾನ]
೪. ಶ್ರೀ ಪುಟ್ಟ ಬಸವಲಿಂಗ ಸ್ವಾಮಿಗಳು [೧೬ನೆಯ ಶತಮಾನ]
೫. ಶ್ರೀ ಮುಪ್ಪಿನ ಬಸವಲಿಂಗ ಸ್ವಾಮಿಗಳು [೧೬ನೆಯ ಶತಮಾನ]
೬. ಶ್ರೀ ಚಿಕ್ಕ [ಚೆನ್ನ] ಬಸವಲಿಂಗ ಸ್ವಾಮಿಗಳು [೧೭ನೆಯ ಶತಮಾನ]
೭. ಶ್ರೀ ಕಪ್ಪಿನ ಬಸವಲಿಂಗ ಸ್ವಾಮಿಗಳು [೧೭ನೆಯ ಶತಮಾನ]
೮. ಶ್ರೀ ದಿಗಂಬರ ಚೆನ್ನಬಸವ ಸ್ವಾಮಿಗಳು [೧೭ನೆಯ ಶತಮಾನ]
೯. ಶ್ರೀ ಬಸವಲಿಂಗ ಸ್ವಾಮಿಗಳು [೧೭ನೆಯ ಶತಮಾನ]
೧೦. ಶ್ರೀ ಚೆನ್ನಮಲ್ಲ ಸ್ವಾಮಿಗಳು [೧೮ನೆಯ ಶತಮಾನ]
೧೧. ಶ್ರೀ ಕೆಂಪಿನ ಬಸವಲಿಂಗ ಸ್ವಾಮಿಗಳು [೧೮ನೆಯ ಶತಮಾನ]
೧೨. ಶ್ರೀ ಹಿರಿಯ ಮಹಾಂತ ಸ್ವಾಮಿಗಳು [೧೮ನೆಯ ಶತಮಾನ]
೧೩. ಶ್ರೀ ಮರಿ ಮಹಾಂತ ಸ್ವಾಮಿಗಳು [೧೯ನೆಯ ಶತಮಾನ]
೧೪. ಶ್ರೀ ಮಹಾಂತ ಸ್ವಾಮಿಗಳು [೧೯ನೆಯ ಶತಮಾನ]
೧೫. ಶ್ರೀ ಗುರುಮಹಾಂತ ಸ್ವಾಮಿಗಳು [೧೮೩೯ – ೧೯೭೫]
೧೬. ಶ್ರೀ ವಿಜಯಮಹಾಂತ ಸ್ವಾಮಿಗಳು [ಸಸಿವಾಳ] [೧೮೭೯ – ೧೯೧೧]
೧೭. ಶ್ರೀ ಗುರುಮಹಾಂತ ಸ್ವಾಮಿಗಳು [ದೋಟಿಹಾಳ] [೧೯೨೮ – ೧೯೩೯]
೧೮. ಶ್ರೀ ಗುರುಮಹಾಂತ ಸ್ವಾಮಿಗಳು [ಜಮಖಂಡಿ] [೧೯೬೨ – ೧೯೭೦]
೧೯. ಶ್ರೀ ಮಹಾಂತ ಸ್ವಾಮಿಗಳು [ಸವದಿ] [೧೯೭೦ ರಿಂದ ೨೦೧೮]
೨೦. ಶ್ರೀ ಗುರುಮಹಾಂತ ಸ್ವಾಮಿಗಳು [ನರಗುಂದ] [೨೦೦೪ ರಿಂದ ........]
[ಸದ್ಯದ ಪೀಠಾಧಿಪತಿಗಳು]

ಈ ರೀತಿಯಾಗಿ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಪೂಜ್ಯ ಮಠಾಧೀಶರ ಹೆಸರುಗಳು ಲಭ್ಯವಿರುತ್ತವೆ. ಆದರೆ ೧ ರಿಂದ ೧೪ ವರೆಗಿನ ಪೂಜ್ಯರ ವಿವರವಾದ ಚಾರಿತ್ರಿಕ ಮಾಹಿತಿಯು ಲಭ್ಯವಿಲ್ಲವಾದ್ದರಿಂದ ೧೫ ರಿಂದ ೨೦ನೆಯವರಾಗಿರುವ ಪೂಜ್ಯರವರೆಗೆ ಇತಿಹಾಸವು ಲಭ್ಯವಿದೆ.

**ಚಿತ್ತರಗಿ ಸಂಸ್ಥಾನಮಠದ ಶಾಖಾಮಠಗಳು :**

ಚಿತ್ತರಗಿ ಪೀಠದ ಇಪ್ಪತ್ತು ಪೂಜ್ಯ ಮಠಾಧಿಪತಿಗಳು ಶಿವಾನುಭವ ಚರವರ್ಯರಾಗಿ 'ಬಸವತತ್ವ ಪ್ರಸಾರ' ಕ್ಕಾಗಿ 'ಅಪ್ಪನವರ ವಚನಗಳ ಅನುಭಾವ' ಮಾಡುತ್ತಾ ಸಂಚರಿಸಿದ ಕಾಲಕ್ಕೆ ಭಕ್ತರು ಶ್ರದ್ಧೆಯಿಂದ ಶಾಖಾಮಠಗಳನ್ನು ಕಟ್ಟಿಸುತ್ತಾ

ಬಂದಿದ್ದು ಇಂದು ಶಾಖಾಮಠಗಳ ಸಂಖ್ಯೆಯು ೭೦ರ ವರೆಗೆ ಬೆಳೆದಿರುತ್ತದೆ.

| | | |
|---|---|---|
| ೧. ಚಿತ್ತರಗಿ | ೨. ಇಳಕಲ್ಲ | ೩. ಹುನಗುಂದ |
| ೪. ಇದ್ದಲಗಿ | ೫. ಬೆಳಗಲ್ಲ | ೬. ಬಿಸನಾಳಕೊಪ್ಪ |
| ೭. ಕೂಡಲಸಂಗಮ | ೮. ಹಡಗಲಿ | ೯. ಹುಲಗಿನಾಳ |
| ೧೦. ಸೂಲೀಬಾವಿ | ೧೧. ಕೆಲೂರ | ೧೨. ಚಿತ್ತವಾಡಗಿ |
| ೧೩. ರಾಮವಾಡಗಿ | ೧೪. ಹಿರೇಬಾದವಾಡಗಿ | ೧೫. ಚಿಕ್ಕಬಾದವಾಡಗಿ |
| ೧೬. ವೀರಾಪೂರ | ೧೭. ಕರಡಿ | ೧೮. ಕೋಡಿಹಾಳ |
| ೧೯. ನಾಗರಾಳ | ೨೦. ಆದಾಪೂರ | ೨೧. ಹಿರೇಓತಗೇರಿ |
| ೨೨. ಅಮರಾವತಿ | ೨೩. ಹಿರೇಶಿವನಗುತ್ತಿ | ೨೪. ಚಿಕ್ಕಶಿವನಗುತ್ತಿ |
| ೨೫. ಚಾಮಲಾಪುರ | ೨೬. ವಜ್ಜಲ | ೨೭. ಮರೋಳ |
| ೨೮. ಹೆರೂರ | ೨೯. ಹಿರೇಕೊಡಗಲಿ | ೩೦. ಗೊರಬಾಳ |
| ೩೧. ಲಿಂಗಸ್ಗೂರ | ೩೨. ಕರಡಕಲ್ಲ | ೩೩. ಎಲಗಲದಿನ್ನೆ |
| ೩೪. ಐದನಾಳ | ೩೫. ಕಾಳಾಪುರ | ೩೬. ಗುಂದಗೋಳಿ |
| ೩೭. ಆನೆಹೊಸೂರ | ೩೮. ಜಾಲಿಬೆಂಚಿ | ೩೯. ಕೆಸರಟ್ಟಿ |
| ೪೦. ಅಡವಿಭಾವಿ | ೪೧. ಕಾಚಾಪುರ | ೪೨. ಬನ್ನಿಗೋಳ |
| ೪೩. ಮುದಗಲ್ಲ | ೪೪. ಹುನಕುಂಟಿ | ೪೫. ಸಂತೆಕೆಲ್ಲೂರ |
| ೪೬. ಕಪ್ಪಿಗುಡ್ಡ | ೪೭. ಐದನಾಳ | ೪೮. ಸರ್ಜಾಪೂರ |
| ೪೯. ಹಲ್ಕಾವಟಗಿ | ೫೦. ಇಚನಾಳ | ೫೧. ಸಲಗಲದಿನ್ನೆ |
| ೫೨. ತೊಂಡಿಹಾಳ | ೫೩. ಹೂಲಗೇರಿ | ೫೪. ಕ್ಯಾದಿಗುಪ್ಪಿ |
| ೫೫. ದೋಟಿಹಾಳ | ೫೬. ಕೆಸೂರ | ೫೭. ಮಾಟೂರ |
| ೫೮. ಜಾಲಿಹಾಳ | ೫೯. ಶಿರಗುಪ್ಪಿ | ೬೦. ಯಲಬುರ್ಗಾ |
| ೬೧. ಹಿರೇವಂಕಲಕುಂದಿ | ೬೨. ಉಪ್ಪಲದಡ್ಡಿ | ೬೩. ಈಚಲಕರಂಜಿ |
| ೬೪. ಲಿಂಗಸೂರು-ಭಾವಣಿ | ೬೫. ಗಂಜಿಹಾಳ | ೬೬. ಹೈದ್ರಾಬಾದ |
| ೬೭. ಶಿರೂರ | ೬೮. ಮೊಳಕಾಲ್ಮೂರು | ೬೯. ಚಿಕ್ಕಮಾಗಿ |
| ೭೦. ಸಿದ್ದಯ್ಯನಕೋಟೆ. | | |

**ಚಿತ್ತರಗಿ ಪೀಠದ ಮಠಾಧೀಶರು :**

ಚಾರಿತ್ರಿಕ ಇತಿಹಾಸವುಳ್ಳ ಚಿತ್ತರಗಿ ಪೀಠದ ಮೊದಲ ಹದಿನಾಲ್ಕು ಜನ ಸ್ವಾಮಿಗಳವರ ಕುರಿತು ವಿವರವಾದ ಮಾಹಿತಿಯು ಲಭ್ಯವಿಲ್ಲ. ೧೫ನೆಯವರಾದ ಪೂಜ್ಯ ಗುರುಮಹಾಂತ ಸ್ವಾಮಿಗಳವರಿಂದ ಪೂಜ್ಯರ ಜೀವನ-ಸಾಧನೆಯ ವಿವರ ತಿಳಿದು ಬರುತ್ತದೆ.

**ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳು : [೧೮೩೯ – ೧೮೭೫]**

ಚಿತ್ತರಗಿ ಪೀಠದ **೧೫ನೆಯ ಪೀಠಾಧಿಪತಿಗಳಾಗಿದ್ದು**, ಮುವತ್ತಾರು ವರುಷ ಶ್ರೀಮಠದ ಕೀರ್ತಿ ಬೆಳಗಲು ಕಾರಣರಾಗಿದ್ದಾರೆ. ಇವರು ಹೈದ್ರಾಬಾದ್ ನವಾಬನಿಗೆ ಪುತ್ರ ಸಂತಾನ ಆಶೀರ್ವಾದ ಮಾಡಿದ ರಾಜಗುರುಗಳಾಗಿದ್ದರು. ಹೈದ್ರಾಬಾದಿನಲ್ಲಿ 'ಮಹಾಂತ ಮಂಜಿಲ್' ಎಂಬ ಬಿಲ್ಡಿಂಗ ಹಾಗು ೬೦೦ ಎಕರೆ ಭೂಮಿಯನ್ನು ಪೂಜ್ಯರಿಗೆ ನವಾಬನು ಅರ್ಪಿಸಿದ್ದನು. ಈಸ್ಟ ಇಂಡಿಯಾ ಕಂಪನಿಯ ಸೇನಾಪತಿ ಬಾಲ್ಮೆನ್ ಸಾಹೇಬನು ಇವರ ಭಕ್ತನಾಗಿದ್ದನು. ಮೆ॥ ಡೆಪೂಟಿ ಕಮೀಶನರ್ ಬುಲಕ್ ಸಾಹೇಬರು ನಿಜಾಂ ಸರಕಾರದ ಪರವಾಗಿ ೧೯.೦೧.೧೮೬೧ ರಂದು ಅರ್ಪಿಸಿದ 'ಚಪರಾಸಿ ಗೌರವ ಬಿಲ್ಲೆ' ಇಂದಿಗೂ ಮಠದಲ್ಲಿದೆ. ಇಳಕಲ್ಲದ ಮುರ್ತುಜಾ ಖಾದ್ರಿ, ಹೇರೂರ ಬಾವಾ, ರುದ್ರಮುನಿ ಸ್ವಾಮಿಗಳು ಇವರೊಂದಿಗೆ ಆಧ್ಯಾತ್ಮಿಕ ಸಂಬಂಧ ಹೊಂದಿದ್ದರು.

**ಪೂಜ್ಯ ವಿಜಯಮಹಾಂತ ಸ್ವಾಮಿಗಳು [ಸಸಿವಾಳ] : [೧೮೭೯ – ೧೯೧೧]**

ಈ ಪೂಜ್ಯರು ಚಿತ್ತರಗಿ ಪೀಠದ **೧೬ನೆಯ ಪೀಠಾಧಿಪತಿಗಳಾಗಿದ್ದು** ಮಹಾತಪಸ್ವಿಗಳೆಂದು ಖ್ಯಾತಿ ಪಡೆದರು. ಅಮರಾವತಿಯ **ಶ್ರೀ ರಾಮಪ್ಪ ದೇಸಾಯಿ** ಹಾಗೂ ಚಿತ್ತರಗಿ– ಇಳಕಲ್ಲ ಭಕ್ತರ ಭಕ್ತಿಗೆ ಒಲಿದು ಈ ಪೀಠವನ್ನಲಂಕರಿಸಿದರು. 'ಕಲ್ಯಾಣದಪ್ಪ' ಬಸವಣ್ಣನವರ ವಚನಗಳಲ್ಲಿ ಅಪಾರ ಶ್ರದ್ಧೆ. ಬಸವ ಭಕ್ತರಾಗಿ ಕುದುರೆಮೇಲೆ ಕುಳಿತು, ಮಹಾಂತಮ್ಮ ಎಂಬ ಆಕಳೊಂದಿಗೆ ಶಿವಾನುಭವ ಚರವರ್ಯರಾಗಿ ನಾಡನ್ನೆಲ್ಲ ಸಂಚರಿಸಿ, ಪಾವನ ಮಾಡಿದರು. "ಚಿತ್ತರಗಿ ದೊರೆಯೇ ನಿನಗಾರು ಸರಿಯೇ, ಸರಿ ಎಂದವರ ಕೈ ಕಾಲು ಮುರಿಯೆ" ಬಹುಪರಾಕ್ ಎಂಬ ಉಗ್ಘಡಿಸುವ ಭಕ್ತ ಸಮೂಹದ ಘೋಷಣೆ ಇಂದಿಗೂ ಜೀವಂತವಾಗಿದೆ. ಶಿವಯೋಗ ಮಂದಿರದ ಸ್ಥಾನವನ್ನು ತೋರಿ, ಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳಿಗೆ ಮಾರ್ಗದರ್ಶನ ಮಾಡಿದ ಮಹಾಮಹಿಮರಿವರು. ಘನಮಠಾರ್ಯರ ಒಡನಾಡಿಗಳು.

**ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳು [ದೋಟಿಹಾಳ] : [೧೯೨೮ – ೧೯೩೯]**

ಚಿತ್ತರಗಿ ಪೀಠದ **೧೭ನೆಯ ಪೀಠಾಧಿಪತಿ** ಗಳಾಗಿ ಶರಣ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಶ್ರಮಿಸಿದರು ಪೂಜ್ಯರು ಅನೇಕ ಅನುಭಾವಿ ಪಂಡಿತರನ್ನು, ಶಾಸ್ತ್ರಿಗಳನ್ನು ಕರೆದುಕೊಂಡು ಅನುಭಾವ ಮಾಡುತ್ತಾ ಸಂಚರಿಸಿದರು.

೧೯೩೯ ರಿಂದ ೧೯೬೩ ವರೆಗೆ ಪೂಜ್ಯರಾದ **ಕೊಪ್ಪದ ಮಹಾಂತ ಸ್ವಾಮಿಗಳು** ಚಿತ್ತರಗಿ ಪೀಠದ ಅಧಿಪತಿಗಳಾಗದೇ, ತ್ಯಾಗಮನೋಭಾವದಿಂದ ಮಠದ ಸರ್ವಾಡಳಿತವನ್ನು ನಡೆಯಿಸಿದರು. ಅನೇಕ ಶಾಖಾಮಠಗಳನ್ನು ಸ್ಥಾಪಿಸಿದರು. ಇವರ ಕಾಲದಲ್ಲಿಯೇ ಸಸಿವಾಳದ ಮಹಾಂತ ದೇವರು

ಉತ್ತರಾಧಿಕಾರಿಗಳಾಗಿ ಬಂದು, ಕಾಶಿಯಲ್ಲಿ ಓದಲು ಹೋದವರು, ವಿದ್ಯಾರ್ಜನೆ ಮುಗಿಯುವ ಕಾಲಕ್ಕೆ ಚಿತ್ತರಗಿ ಪೀಠಕ್ಕೆ, ಅಧಿಕಾರಿಗಳಾಗದೆ, ಹುಬ್ಬಳ್ಳಿ ಮೂರುಸಾವಿರ ಮಠಕ್ಕೆ ಜಗದ್ಗುರುಗಳಾಗಿ ಹೋದರು.

**ಪೂಜ್ಯ ಶ್ರೀ ಡಾ. ಮಹಾಂತ ಸ್ವಾಮಿಗಳು [ಸವದಿ] : [೧೯೭೦ - ೨೦೧೮]**

ಚಿತ್ತರಗಿ ಪೀಠದ ೧೮ನೆಯ ಸ್ವಾಮಿಗಳಾಗಿದ್ದ ಶ್ರೀಮನಿಪ್ರ ಗುರು-ಮಹಾಂತರು ಆಕಸ್ಮಿಕವಾಗಿ ಲಿಂಗೈಕ್ಯರಾಗಲು, ತೆರವಾಗಿದ್ದ ಪೀಠಕ್ಕೆ ಚಿತ್ತರಗಿ ಇಳಕಲ್ಲ ಭಕ್ತರ ಪ್ರಾರ್ಥನೆ ಬಸವಗುರು ಪ್ರೇರಣೆಯಂತೆ, ಹಾಲಕೆರೆ, ಹಾನಗಲ್ಲ, ಹುಬ್ಬಳ್ಳಿ ಮುರಗೋಡ ಶ್ರೀಗಳವರ ಸದಿಚ್ಛೆಯಂತೆ ಸವದಿಯ ಸದ್ಭಕ್ತರ ಹೃದಯವಂತಿಕೆಯಿಂದಾಗಿ ಅವರ ಒಪ್ಪಿಗೆ ಪಡೆದು ಸವದಿಯ ಮಹಾಂತಸ್ವಾಮಿಗಳು, ಚಿತ್ತರಗಿ ಸಂಸ್ಥಾನ ಇಳಕಲ್ಲದ **೧೯ನೆಯ ಮಠಾಧಿಪತಿಗಳಾಗಿ** ಅಧಿಕಾರ ಸ್ವೀಕರಿಸಿದರು. ೧೯೭೦ನೆಯ ಇಸ್ವಿ ಮೇ ೧೭ರಂದು ಪೂಜ್ಯರ ಪಟ್ಟಾಧಿಕಾರ ಮಹೋತ್ಸವ ಜರುಗಿತು. ಹಾನಗಲ್ಲದ ಪೂಜ್ಯ ಶ್ರೀ ಕುಮಾರ ಮಹಾಸ್ವಾಮಿಗಳವರಿಂದ ಅನುಗ್ರಹಿತರಾಗಿದ್ದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಕಾಪನಹಳ್ಳಿಯ ಪೂಜ್ಯ ಶಿವಯೋಗಿಗಳವರು ನಿರಂಜನ ಸಿಂಹಾಸನಾರೋಹಣಗೈಸಿದರು. ಪೂಜ್ಯರೊಂದಿಗೆ ಅಸೀನರಾದರು.

ಸವದಿಯ ಮಹಾಂತರು, ಚಿತ್ತರಗಿ ಪೀಠಕ್ಕೆ ಅಧಿಪತಿಗಳಾಗಿ ಬಂದು ೪೮ ವರ್ಷ ಚಿತ್ತರಗಿ ಜ್ಯೋತಿಯು ಬಸವಜ್ಯೋತಿಯಾಗಿ ಜಗಜ್ಯೋತಿಯಾಗಿ, ಭೂಮಂಡಲವನ್ನೇ ಬೆಳಗುವಂತಾಯಿತು. ಪೂಜ್ಯರ ಸಾಧನೆಯ ಸಂಕ್ಷಿಪ್ತ ಮಾಹಿತಿ ಹೀಗಿದೆ–

**ಚಿತ್ತರಗಿ ಪೀಠದ ಶಾಖಾಮಠಗಳ ಜೀರ್ಣೋದ್ಧಾರ :**

ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಇದರ ಶಾಖೆಗಳು ವಿಜಾಪುರ, ರಾಯಚೂರ, ಬೆಳಗಾವಿ, ಹೈದ್ರಾಬಾದ, ಚಿತ್ರದುರ್ಗ ಮುಂತಾದ ಭಾಗಗಳಲ್ಲಿದ್ದು ಕೆಲವು ಕಾಲ ಗರ್ಭದಲ್ಲಿ ಮರೆಯಾಗಿದ್ದರೆ, ಇನ್ನು ಕೆಲವು ಜೀರ್ಣಾವಸ್ಥೆಗೆ ತಲುಪಿದ್ದವು. ಪೂಜ್ಯರು ೧೯೭೦ರಲ್ಲಿ ಚಿತ್ತರಗಿ ಪೀಠದ ಅಧಿಕಾರವಹಿಸಿಕೊಂಡ ನಂತರ ಶಾಖಾಮಠಗಳ ಜೀರ್ಣೋದ್ದಾರ, ಅಲ್ಲಿ ಶಿವಾನುಭವ, ದಾಸೋಹ ನಡೆಯುವಂತೆ ಮಾಡಿದರು.

**ಶರಣಸಿದ್ಧಾಂತ ವಿದ್ಯಾಪೀಠದ ಸ್ಥಾಪನೆ : ಮಹಾಂತ ಜೋಳಿಗೆಯ ಉಗಮ :**

೧೯೭೪ ರಲ್ಲಿ ಪರಮಪೂಜ್ಯ ಲಿಂ. ವಿಜಯಮಹಾಂತ ಶಿವಯೋಗಿ-ಗಳವರ ೬೩ನೆಯ ಪುಣ್ಯಸ್ಮರಣೋತ್ಸವದ ಸಂದರ್ಭ. ಪೂಜ್ಯರು ಹುನುಗುಂದದ ತಮ್ಮ ಶಾಖಾ ಮಠದಲ್ಲಿ ೬೩ ಜನ ಗುರು-ವಿರಕ್ತ ಸ್ವಾಮಿಗಳವರ ಜಂಗಮಪೂಜಾ

ಮಹೋತ್ಸವ ಹಾಗೂ ಶಿವಾನುಭವ ಗೋಷ್ಠಿಗಳನ್ನು ಶ್ರೀ ಮಠದ ಸದ್ಭಕ್ತರ ಸದಿಚ್ಛೆ-ಸಹಕಾರಗಳೊಂದಿಗೆ ಹಮ್ಮಿಕೊಂಡಿದ್ದರು. ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಿ ಜರುಗಿದವು. ಆದರೆ ಕೊನೆಯ ಸಂದರ್ಭದಲ್ಲಿ ಗುರುವರ್ಗದ ಒಬ್ಬ ಹಿರಿಯ ಮಠಾಧಿಪತಿಗಳು ಹಾಗೂ ವಿರಕ್ತವರ್ಗದ ಒಬ್ಬ ಹಿರಿಯ ಮಠಾಧಿಪತಿಗಳಲ್ಲಿ ತಾತ್ವಿಕ ಹಾಗೂ ವ್ಯಕ್ತಿಗತ ಭಿನ್ನಾಭಿಪ್ರಾಯ ಉಂಟಾಗಿ ಬಹಿರಂಗ ವೇದಿಕೆಯ ಮೇಲೆ ಅದು ಕಲಹ-ಗೊಂದಲಮಯವಾಗಿ ಮಾರ್ಪಾಟಾಯಿತು.

ಪೂಜ್ಯರು ಮನನೊಂದರು, ಹಗಲಿರುಳು ಚಿಂತನ ನಡೆಸಿದರು. ಇಷ್ಟಲಿಂಗ ಪೂಜೆಯಲ್ಲಿ ನಿರತರಾದರು. ಶಿವಾನುಭಾವಿ ಶರಣರು, ಸದ್ಭಕ್ತರೊಂದಿಗೆ ಚಿಂತನಗೈದರು. ೧೯೭೫ ನವೆಂಬರ ತಿಂಗಳು-ಬಸವಗುರು ಕರುಣೆ, ವಿಜಯ ಮಹಾಂತಶಿವಯೋಗಿಗಳ ಪ್ರೇರಣೆಯಿಂದ ಏಕಾಂಗವೀರರಾಗಿ ಸಮಾಜೋ-ಧಾರ್ಮಿಕ ಮಹಾಮಣಿಹ ಪೂರೈಸಲು ದೃಢಸಂಕಲ್ಪ ತಾಳಿದರು. ೧೯೭೫ರಲ್ಲಿ ಎರಡು ಯೋಜನೆಗಳನ್ನು ಹುಟ್ಟುಹಾಕಿದರು.

೧. ಶರಣಸಿದ್ಧಾಂತ ವಿದ್ಯಾಪೀಠ ಸ್ಥಾಪನೆ

೨. ಮಹಾಂತ ಜೋಳಿಗೆಯ ಯೋಜನೆ

'ಬಸವ' ಮಂತ್ರ ಪೂಜ್ಯರ ಉಸಿರಾಯಿತು. ಬಸವತತ್ವದ ಆಚರಣೆ, ಪ್ರಸಾರ ಪೂಜ್ಯರ ಧ್ಯೇಯವಾಯಿತು.

'ವ್ಯಷ್ಟಿ-ಸಮಷ್ಟಿ' ಎರಡರ ಶುದ್ಧೀಕರಣವಾಗಬೇಕು. ಮಹಾಂತ ಜೋಳಿಗೆಯು ವ್ಯಕ್ತಿಯ ಅಂತರಂಗ-ಬಹಿರಂಗದ ದುರ್ವ್ಯಸನ ದುರಾಚಾರಗಳ ಭಿಕ್ಷೆ ಬೇಡುತ್ತಾ ಜನಮಾನಸದ ಹೃದಯ ಭೂಮಿಯನ್ನು ಹಸನು ಮಾಡುತ್ತಾ ಸಾಗಿದರೆ, ಶರಣಸಿದ್ಧಾಂತ ವಿದ್ಯಾಪೀಠವು ಶಿವಾನುಭವ ಶಿಬಿರ-ಕಮ್ಮಟಗಳನ್ನು ಸಂಘಟಿಸುತ್ತಾ ಹಸನಗೊಂಡ ಹೃದಯ ಭೂಮಿಯಲ್ಲಿ ಬಸವತತ್ವದ ಬೀಜಗಳನ್ನು ಬಿತ್ತುತ್ತಾ ಸಾಗಿತು.

**ಮಹಾಂತಜೋಳಿಗೆಯ ಸಂಚಾರ :**

೧೯೭೫ ನವೆಂಬರ ತಿಂಗಳು ಹುನಗುಂದದಲ್ಲಿ ಶಿವಶರಣ ಮಾದಾರ-ಚೆನ್ನಯ್ಯನ ಕೇರಿಯಿಂದಲೇ ಮಹಾಂತಜೋಳಿಗೆಯ ಸಂಚಾರದ ಜಂಗಮಕಾಯಕ ಪ್ರಾರಂಭಿಸಿದರು. ಕಳೆದ ೪೩ ವರುಷಗಳಿಂದ 'ಮಹಾಂತಜೋಳಿಗೆ' ಯು ಹುನಗುಂದ ತಾಲೂಕು, ವಿಜಾಪುರ ಜಿಲ್ಲೆ, ಕರ್ನಾಟಕ ರಾಜ್ಯ, ಮಹಾರಾಷ್ಟ್ರ, ಆಂದ್ರಪ್ರದೇಶ, ತಮಿಳುನಾಡು, ಕೇರಳ, ಉತ್ತರಪ್ರದೇಶ, ದಿಲ್ಲಿ ಪ್ರಾಂತಗಳಲಿ ಸಂಚರಿಸಿ, ಭಾರತದ ಗಡಿದಾಟಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯೂ ಕೂಡ ಸಂಚರಿಸಿ ಬಂದಿದೆ.

ವ್ಯಕ್ತಿ-ಕುಟುಂಬ, ಸಮಾಜ-ರಾಷ್ಟ್ರ, ಜಗತ್ತನ್ನೇ ಹಾಳು ಮಾಡುವ

ಅಂತರಂಗ-ಬಹಿರಂಗದ ದುರ್ವ್ಯಸನ, ದುಶ್ಚಟ, ದುರಾಚಾರ, ದುರ್ಗುಣ, ವ್ಯಭೀಚಾರ, ಅನಾಚಾರ, ಸುಳ್ಳು, ಕಪಟ, ಮೋಸ, ವಂಚನೆ, ಕಲಹ, ಹಾದರ, ದೇವದಾಸಿಪದ್ಧತಿ, ಮೂಢನಂಬಿಕೆ, ಕಂದಾಚಾರ, ಲಂಚ-ವಂಚನೆ, ವರದಕ್ಷಿಣೆ, ರುದ್ರಾಭಿಷೇಕ ಲಕ್ಷದೀಪೋತ್ಸವ ನೆಪದಲ್ಲಿ ಹಾಳಾಗುತ್ತಿರುವ ಅಪ್ಯಾಯನ ಪ್ರಸಾದದ ಅಂಧರೂಢಿಗಳು ಎಲ್ಲವನ್ನೂ ಮಹಾಂತ ಜೋಳಿಗೆ ಸ್ವೀಕರಿಸಿದೆ. ಭಕ್ತರ ಮನೆಗಳನ್ನು, ಸ್ವಾಮಿಗಳು ಮಠಗಳನ್ನು, ಶಿಕ್ಷಣ ಸಂಸ್ಥೆಗಳನ್ನು ರಾಜಕೀಯ ಸೌಧಗಳನ್ನು ಹೊಕ್ಕು ಮಹಾಂತ ಜೋಳಿಗೆಯು ಭಿಕ್ಷೆ ಸ್ವೀಕರಿಸಿದೆ.

'ಮಹಾಂತ ಜೋಳಿಗೆ' ಯೊಳಗೆ ತಮ್ಮ ಬಾಳಿನ ಕೆಟ್ಟದ್ದೆಲ್ಲವನ್ನು ನೀಡಿದವರು ಉದ್ದಾರವಾಗಿದ್ದಾರೆ. ಪಾವನರಾಗಿದ್ದಾರೆ, ಶರಣರಾಗಿದ್ದಾರೆ. ಲಕ್ಷಾಂತರ ಜನರು ಉದ್ದಾರವಾಗಿದ್ದಾರೆ, ಸಹಸ್ರ, ಸಹಸ್ರ ಮನೆತನಗಳು ನಾಶವಾಗುವುದರಿಂದ ತಪ್ಪಿಸಿಕೊಂಡಿವೆ. ಲಕ್ಷಾಂತರ ತಾಯಂದಿರು ವಿಧವೆಯರಾಗುವುದು ತಪ್ಪಿದೆ. ಕೋಟ್ಯಾಂತರ ಮಕ್ಕಳು ಅನಾಥರಾಗುವುದು ತಪ್ಪಿದೆ.

**ಮಹಾಂತ ಜೋಳಿಗೆ ಸಂಚಾರದ ವಿವರ:**

೧೯೭೬ – ಹುನಗುಂದ, ಇಳಕಲ್ಲ.
೧೯೭೭ – ರಾಯಚೂರ ಜಿಲ್ಲೆ.
೧೯೭೮ – ಕುಷ್ಟಗಿ, ಲಿಂಗಸಗೂರು ತಾಲೂಕುಗಳು.
೧೯೭೯ – ಧಾರವಾಡ ಜಿಲ್ಲೆಯ ಸವಣೂರು, ಗದಗ ತಾಲೂಕುಗಳು.
೧೯೮೦ – ಗುಳೇದಗುಡ್ಡ, ಬದಾಮಿ ಭಾಗ.
೧೯೮೧ – ಅಮರಾವತಿ – ಹುನಗುಂದ.
೧೯೮೨ – ಶಿವಯೋಗ ಮಂದಿರ – ಬದಾಮಿ ತಾಲೂಕು.
೧೯೮೩ – ಹಾಲ್ವಿ, ಅದೋನಿ, ಆಂಧ್ರಭಾಗ.
೧೯೮೪ – ರಾಮದುರ್ಗ – ಬೆಳಗಾವಿ ಜಿಲ್ಲೆಯ ಗ್ರಾಮಗಳು.
೧೯೮೫ – ಭಾಲ್ಕಿ, ಬಸವಕಲ್ಯಾಣ, ಔರದ, ಹುಮನಾಬಾದ, ಬೀದರ ತಾಲೂಕುಗಳು.
೧೯೮೬ – ದಾವಣಗೆರೆನಗರದ ವಿವಿಧ ಬಡಾವಣೆಗಳು.
೧೯೮೭ – ಧಾರವಾಡನಗರ, ಬಡಾವಣೆಗಳು ಸುತ್ತಣ ಗ್ರಾಮಗಳು.
– ಇಳಕಲ್ಲ ಹಾಗೂ ಸುತ್ತಣ ಗ್ರಾಮಗಳು.
೧೯೮೮ – ಸಂಕೇಶ್ವರ, ಹುಕ್ಕೇರಿ,
– ಗುಲಬರ್ಗಾನಗರ ಬಡಾವಣೆಗಳು.
– ಅಥಣಿ ತಾಲೂಕಿನ ಗ್ರಾಮಗಳು, ಸವದಿ, ಸತ್ತಿ.
೧೯೮೯ – ಹಳ್ಳಿಖೇಡ (ಬಿ) ಹಾಗೂ ಹುಮನಾಬಾದ ತಾಲೂಕಿನ ಗ್ರಾಮಗಳು.

– ಅಥಣಿ ತಾಲೂಕು, ಗ್ರಾಮಗಳು.

೧೯೯೦ – ಇಂಗ್ಲಂಡ್. ಸ್ಕಾಟಲ್ಯಾಂಡ್, ವೇಲ್ಸ್, ಐರ್‌ಲ್ಯಾಂಡ್, ಆ್ಯಂಗಲ್ ಸೀ ನಡುಗಡ್ಡೆಗಳು, ಯುರೋಪ ಖಂಡದಲ್ಲಿ ಸಂಚಾರ.

– ಚಿಂಚೋಳಿ, ಗುಲಬರ್ಗಾ ಜಲ್ಲೆ.

– ಹರಿಹರ, ಕುಂಬಳೂರು, ಮಲೆಬೆನ್ನೂರ, ಗ್ರಾಮಗಳಲ್ಲಿ.

– ವಿಜಾಪುರ ಜಿಲ್ಲೆ ಸಿಂದಗಿ ತಾಲೂಕಿನ ಚಾಂದಕವಠೆ ಗ್ರಾಮದಲ್ಲಿ.

೧೯೯೧ – ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲೂಕ ಮರಳೆಗವಿಮಠ ಹಾಗೂ ಸುತ್ತಲಿನ ಗ್ರಾಮಗಳಲ್ಲಿ.

೧೯೯೨ – ಸವದತ್ತಿ ತಾ. ಯರಗಟ್ಟಿ ಹಾಗೂ ಸುತ್ತಲಿನ ಗ್ರಾಮಗಳಲ್ಲಿ.

೧೯೯೩ – ಬಾಗಲಕೋಟೆ ಮಲ್ಲಾಪುರ ಹಾಗೂ ಇತರೆ ಗ್ರಾಮಗಳಲ್ಲಿ. ಬಸವಕಲ್ಯಾಣ ತಾಲೂಕಿನ ಹಳ್ಳಿಗಳು.

೧೯೯೪ – ಬೀದರ ನಗರ, ಬಡಾವಣೆಗಳು.

– ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ

– ಆಂಧ್ರ, ಮೇಡಕ ಜಿಲ್ಲೆ ಜಹಿರಾಬಾದ ಸುತ್ತಲ ಗ್ರಾಮಗಳು.

೧೯೯೫ – ಮಹಾರಾಷ್ಟ್ರ – ಉದಗೀರ, ಲಾತೂರ.

– ಅಥಣಿ ತಾಲೂಕಿನ ಗ್ರಾಮಗಳು.

– ಚಿತ್ತರಗಿ ಸುತ್ತಲ ಗ್ರಾಮಗಳು.

೧೯೯೫ – ೪೦ ದಿನ ಬಸವಕಲ್ಯಾಣ ಅನುಭವ ಮಂಟಪದಿಂದ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಬಸವ ಸಂದೇಶ ಯಾತ್ರೆ, ಮಹಾಂತ ಜೋಳಿಗೆ ಸಂಚಾರ.

೧೯೯೬ – ಹುನುಗುಂದ ತಾಲೂಕಿನ ಗ್ರಾಮಗಳು, ಹುಬ್ಬಳ್ಳಿ ನಗರದ ಬಡಾವಣೆಗಳು.

– ಬಾಗಲಕೋಟೆ ತಾಲೂಕಿನ ಗ್ರಾಮಗಳು.

೧೯೯೭ – ಬಸವಕಲ್ಯಾಣ–ಮಂಠಾಳ, ಪ್ರತಾಪುರ, ಹುಲಸೂರ,

೧೯೯೮ – ತುಮಕೂರ ನಗರ, ಬಡಾವಣೆಗಳು.

೧೯೯೯ – ಹೊಸದಿಲ್ಲಿ, ಬಡಾವಣೆಗಳು.

– ಗುಲಬರ್ಗಾ; ಮಹಾಗಾಂವ, ಕಮಲಾಪುರ.

– ದಾವಣಗೆರೆ ನಗರ ಬಡಾವಣೆಗಳು.

೨೦೦೦ – ದಾವಣಗೆರೆ ತಾಲೂಕು, ಕಲಬುರ್ಗಿ, ಜೇವರಗಿ, ಕಲ್ಲೂರ (ಕೆ).

೨೦೦೧ – ಅಥಣಿ, ಮಲಾಬಾದ, ಸುತ್ತಲ ಗ್ರಾಮಗಳು. ಸಿದ್ದಯ್ಯನಕೋಟೆ.

೨೦೦೨ – ಸೋಲಾಪುರ, ಅಕ್ಕಲಕೋಟೆ ಮಹಾರಾಷ್ಟ್ರದ ಗ್ರಾಮಗಳು.

– ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ಸಿದ್ದಯ್ಯನಕೋಟೆ ಭಾಗದ ಗ್ರಾಮಗಳು.

– ಚಿತ್ತರಗಿ ಮೂಲಪೀಠದ ಸುತ್ತಮುತ್ತಲಿನ ಗ್ರಾಮಗಳಲ್ಲಿ ಮೂರು ದಿನ ಮಹಾಂತಜೋಳಿಗೆ ಸಂಚರಿಸಿದೆ.

೨೦೦೩ – ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮುರು, ಜಗಳೂರು ತಾಲೂಕುಗಳು.

೨೦೦೪ – ಅಥಣಿ ತಾಲೂಕು–ಗ್ರಾಮಗಳು.

೨೦೦೫ – ಬಸವ ಕಲ್ಯಾಣ ತಾಲೂಕು–ಗ್ರಾಮಗಳು.

೨೦೦೬ – ತಮಿಳುನಾಡು–ಭವಾನಿ, ಕೊಯಮತ್ತೂರು.

೨೦೦೭ – ಲಿಂಗಸೂರು–ಛಾವಣಿ, ಕರಡಕಲ್ಲು.

೨೦೦೮ – ಜಮಖಂಡಿ.

೨೦೦೯ – ಗದಗ ನಗರದ ವಿವಿಧ ಬಡಾವಣೆಗಳು.

– ಬಸವಕಲ್ಯಾಣ, ಬೇಲೂರು, ಬೆಟ್ಟದಬಾಲಕಂದ, ಪರ್ತಾಪುರ.

೨೦೧೦ – ಲಿಂಗಸಗೂರು, ಸಿದ್ಧಯ್ಯನಕೋಟೆ.

೨೦೧೧ – ಧಾರವಾಡ, ಮನಗುಂಡಿ, ಇಳಕಲ್ಲ, ಸವದಿ.

೨೦೧೨ – ಅಥಣಿ ತಾಲೂಕಿನ ಗ್ರಾಮಗಳು

೨೦೧೩ – ಜಮಖಂಡಿ ಹಾಗೂ ಸುತ್ತಲಿನ ಗ್ರಾಮಗಳು

೨೦೧೪ – ಸಿದ್ಧಯ್ಯನಕೋಟೆ ಹಾಗೂ ಸುತ್ತಲಿನ ಗ್ರಾಮಗಳು

೨೦೧೫ – ಹುನಗುಂದ ಹಾಗೂ ಸುತ್ತಲಿನ ಗ್ರಾಮಗಳು

೨೦೧೬ – ಧಾರವಾಡ ಗಾಂಧಿನಗರ ಹಾಗೂ ಬಡಾವಣೆಗಳು

೨೦೧೭ – ಹಿರೇಬಾದವಾಡಗಿ ಹಾಗೂ ಸುತ್ತಲಿನ ಗ್ರಾಮಗಳು

೨೦೧೮ – ಅಥಣಿ ತಾಲೂಕಿನ ಸವದಿ ಹಾಗೂ ಇಳಕಲ್ಲ

**ಶರಣಸಿದ್ಧಾಂತ ವಿದ್ಯಾಪೀಠ–ಅದರ ಶಿಬಿರಗಳು :**

ಶರಣಸಿದ್ಧಾಂತ ವಿದ್ಯಾಪೀಠವು ಬಸವಾದಿ ಶರಣರ ವಿಶ್ವಮಾನ್ಯ ತತ್ವ–ಸಿದ್ಧಾಂತ–ಅನುಭಾವ (Philosophy, Metaphysics, Mysticism) ಗಳ ತಳಹದಿಯ ಮೇಲೆ ಸ್ಥಾಪಿಸಲ್ಪಟ್ಟ ಸಂಸ್ಥೆಯಾಗಿದೆ. ಪೂಜ್ಯ ಮಹಾಂತ ಶಿವಯೋಗಿಗಳು ಈ ಪೀಠದ ಜನಕರು. ಪೂಜ್ಯರ ನೇತೃತ್ವದಲ್ಲಿ ಕಳೆದ ೪೨–೪೩ ವರುಷಗಳಲ್ಲಿ ಸಾರ್ವಜನಿಕರಿಗಾಗಿ ೩೬ ಶಿವಾನುಭವ ಶಿಬಿರಗಳು, ಶಿಕ್ಷಕರಿಗಾಗಿ ೬ ಶಿವಾನುಭವ ಶಿಬಿರಗಳು, ಮಕ್ಕಳಿಗಾಗಿ–ಯುವಕರಿಗಾಗಿ ಮೂರು ಶಿವಾನುಭವ ಶಿಬಿರಗಳು, ಮಹಿಳೆಯರಿಗಾಗಿ ಮೂರು ಶಿವಾನುಭವ ಶಿಬಿರಗಳನ್ನು ಸಂಘಟಿಸಲಾಗಿದೆ. ಹುನಗುಂದ, ಇಳಕಲ್ಲ, ಗುಳೇದಗುಡ್ಡ, ಅಮರಾವತಿ, ಶಿವಯೋಗಮಂದಿರ, ರಾಮದುರ್ಗ, ಧಾರವಾಡ, ದಾವಣಗೆರೆ, ಸಿದ್ದಗಂಗಾ, ಕೆ. ಆರ್. ಪೇಟೆ, ಲಾತೂರ, ಉದಗೀರ, ಜಹಿರಾಬಾದ, ಕಲಬುರ್ಗಿ, ಭಾಲ್ಕಿ, ಬೀದರ, ಬಸವಕಲ್ಯಾಣ,

ಮಲ್ಲಾಪೂರ, ಬಾಗಲಕೋಟೆ, ಸವದಿ, ಅಥಣಿ, ಲಿಂಗಸಗೂರು, ಹುಬ್ಬಳ್ಳಿ, ಕನಕಪುರ, ಮಲಾಭಾದ, ಗದಗ, ಮನಗುಂಡಿ, ಹಿರೇಬಾದವಾಡಗಿ ಮುಂತಾದ ಗ್ರಾಮ-ಪಟ್ಟಣಗಳಲ್ಲಿ ಶಿವಾನುಭವ ಶಿಬಿರ-ಕಮ್ಮಟಗಳು ಜರುಗಿವೆ. ಪ್ರಾರಂಭದ ೪-೫ ವರುಷ ಪ್ರೊ. ಜಿ. ಹೆಚ್. ಹನ್ನೆರಡುಮಠ ಪ್ರೊ. ವಿ. ವಿ. ಅಲೆಗಾವಿ, ಪ್ರೊ. ಬಿ. ಎಂ. ತೆಳಗಡೆ, ಡಾ. ಶಂಭು ಬಳಿಗಾರ, ಪ್ರೊ. ಕೆ. ಎಸ್. ಕುಲಕರ್ಣಿ ಮುಂತಾದವರು ಕ್ರಿಯಾಶೀಲರಾಗಿ ಕೆಲಸ ಮಾಡಿದರು. ಇವರೊಂದಿಗೆ ಶರಣ ಸಾಹಿತಿಗಳಾದ ಪ್ರೊ. ಸಿದ್ಧಣ್ಣ ಲಂಗೋಟಿ ಅವರು ಶರಣಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾಗಿ ಪೂಜ್ಯ ಮಹಾಂತ ಶಿವಯೋಗಿಗಳ ಬಸವತತ್ವ ಪ್ರಸಾರದ ಮಹಾಮಣಿಹದಲ್ಲಿ ನಾಲ್ಕು ದಶಕಗಳ ಕಾಲ ಸೇವೆ ಸಲ್ಲಿಸಿದ್ದಾರೆ.

**ಶರಣ ಸಿದ್ಧಾಂತ ವಿದ್ಯಾಪೀಠದ ಶಿವಾನುಭವ ಶಿಬಿರಗಳ ವಿವರ :**

| | | | |
|---|---|---|---|
| ೧. | ಇಳಕಲ್ಲ | ೧೯೭೭ | ಅಕ್ಟೋಬರ ತಿಂಗಳಲ್ಲಿ |
| ೨. | ಹುನಗುಂದ | ೧೯೭೮ | ಅಕ್ಟೋಬರ ತಿಂಗಳಲ್ಲಿ |
| ೩. | ಗುಳೇದಗುಡ್ಡ | ೧೯೮೦ | [೧೦-೧೦-೮೦ ರಿಂದ ೧೮-೧೦-೮೦] |
| ೪. | ಅಮರಾವತಿ | ೧೯೮೧ | [೧೫-೧೧-೮೧ ರಿಂದ ೨೩-೧೧-೮೧] |
| ೫. | ಶಿವಯೋಗಮಂದಿರ | ೧೯೮೨ | [೦೩-೧೦-೮೨ ರಿಂದ ೧೨-೧೦-೮೨] |
| ೬. | ರಾಮದುರ್ಗ | ೧೯೮೪ | [೧೨-೧೦-೮೪ ರಿಂದ ೧೯-೧೦-೮೪] |
| ೭. | ಭಾಲ್ಕಿ | ೧೯೮೫ | [೧೫-೦೫-೮೫ ರಿಂದ ೦೧-೦೬-೮೫] |
| ೮. | ಸಿದ್ಧಗಂಗಾ | ೧೯೮೫ | [೨೪-೧೦-೮೫ ರಿಂದ ೩೦-೧೦-೮೫] |
| ೯. | ದಾವಣಗೆರೆ | ೧೯೮೬ | [೧೬-೧೦-೮೬ ರಿಂದ ೨೩-೧೦-೮೬] |
| ೧೦. | ಧಾರವಾಡ | ೧೯೮೭ | [೦೪-೧೦-೮೭ ರಿಂದ ೧೧-೧೦-೮೭] |
| ೧೧. | ಹೀರಾಶುಗರಸಂಕೇಶ್ವರ | ೧೯೮೮ | [೦೧-೦೧-೮೮ ರಿಂದ ೦೭-೦೧-೮೮] |
| ೧೨. | ಕಲಬುರ್ಗಿ | ೧೯೮೮ | [೦೩-೧೦-೮೮ ರಿಂದ ೦೯-೧೦-೮೮] |
| ೧೩. | ಅಥಣಿ | ೧೯೮೯ | [೦೨-೧೦-೮೯ ರಿಂದ ೦೯-೧೦-೮೯] |
| ೧೪. | ಚಿಂಚೋಳಿ | ೧೯೯೦ | [೧೪-೦೪-೯೦ ರಿಂದ ೨೦-೦೪-೯೦] |
| ೧೫. | ಮರಳಗವಿಮಠ ತಾ. ಕನಕಪುರ | ೧೯೯೧ | [೨೦-೧೦-೯೧ ರಿಂದ ೨೭-೧೦-೯೧] |
| ೧೬. | ಯರಗಟ್ಟಿ | ೧೯೯೨ | [೧೧-೦೪-೯೨ ರಿಂದ ೧೪-೦೪-೯೨] |
| ೧೭. | ಬಸವಕಲ್ಯಾಣ | ೧೯೯೨ | [೨೨-೧೦-೯೨ ರಿಂದ ೨೮-೧೦-೯೨] |
| ೧೮. | ಬೀದರ | ೧೯೯೪ | [೧೩-೦೪-೯೪ ರಿಂದ ೧೮-೦೪-೯೪] |

೧೯. ಚೆಳ್ಳಕೆರೆ ೧೯೯೪ [೧೬-೦೫-೯೪ ರಿಂದ ೨೩-೦೫-೯೪]

೨೦. ಜಹಿರಬಾದ (ಆಂಧ್ರ)೧೯೯೪ [೦೭-೧೦-೯೪ ರಿಂದ ೧೨-೧೦-೯೪]

೨೧. ಉದಗೀರ (ಮಹಾರಾಷ್ಟ್ರ)೧೯೯೫ [೦೯-೧೦-೯೫ ರಿಂದ ೧೩-೧೦-೯೫]

೨೨. ಕುಂಬಳೂರು ೧೯೯೫ [೧೫-೧೦-೯೫ ರಿಂದ ೧೭-೧೦-೯೫]

೨೩. ಅಥಣಿ ೧೯೯೫ [೨೦-೧೦-೯೫ ರಿಂದ ೨೨-೧೦-೯೫]

೨೪. ಹುಬ್ಬಳ್ಳಿ ೧೯೯೬ [೦೬-೧೦-೯೬ ರಿಂದ ೧೧-೧೦-೯೬]

೨೫. ಬಾಗಲಕೋಟೆ ೧೯೯೭ [೦೯-೦೫-೯೭ ರಿಂದ ೧೩-೦೫-೯೭]

೨೬. ಬಸವಕಲ್ಯಾಣ ೧೯೯೭ [೨೭-೧೦-೯೭ ರಿಂದ ೦೪-೧೧-೯೭]

೨೭. ತುಮಕೂರ ೧೯೯೮ [೦೪-೧೦-೯೮ ರಿಂದ ೧೧-೧೦-೯೮]

೨೮. ಕಲಬುರ್ಗಿ ೧೯೯೯ [೩೧-೧೦-೯೯ ರಿಂದ ೦೮-೧೧-೯೯]

೨೯. ಮಲಾಬಾದ ತಾ.ಅಥಣಿ೨೦೦೧ [೦೧-೦೬-೦೧ ರಿಂದ ೦೨-೦೬-೦೧]

೩೦. ಚಿತ್ತರಗಿ ೨೦೦೨ [೧೫-೧೧-೦೨ ರಿಂದ ೧೭-೧೧-೦೨]

೩೧. ಬಸವಕಲ್ಯಾಣ ೨೦೦೩ [೨೦-೧೦-೦೩ ರಿಂದ ೨೪-೧೦-೦೩]

೩೨. ಬಸವಕಲ್ಯಾಣ ೨೦೦೫ [೨೮-೧೦-೦೫ ರಿಂದ ೩೦-೧೦-೦೫]

೩೩. ಗದಗ ೨೦೦೯ [೧೭-೦೫-೦೯ ರಿಂದ ೨೩-೦೫-೦೯]

೩೪. ಬಸವಕಲ್ಯಾಣ ೨೦೦೯ [೧೯-೧೦-೦೯ ರಿಂದ ೨೫-೧೦-೦೯]

೩೫. ಮನಗುಂಡಿ ೨೦೧೧ [೧೮-೦೯-೧೧ ರಿಂದ ೨೦-೦೯-೧೧]
ತಾ॥ ಧಾರವಾಡ

೩೬. ಹಿರೇಬಾದವಾಡಗಿ ೨೦೧೭ [೨೧-೦೪-೧೭ ರಿಂದ ೨೩-೦೪-೧೭]

**ಶಿಕ್ಷಕರ ಶಿವಾನುಭವ ಶಿಬಿರ :**

೧. ಇಳಕಲ್ಲ ೧೯೮೭ [೦೪-೦೫-೮೭ ರಿಂದ ೧೧-೦೫-೮೭]

೨. ಸವದಿ ೧೯೮೮ [೨೨-೦೪-೮೮ ರಿಂದ ೨೯-೦೪-೮೮]

೩. ಹಳ್ಳಿಖೇಡ (ಬಿ) ೧೯೮೯ [೨೧-೦೫-೮೯ ರಿಂದ ೨೮-೦೫-೮೯]

೪. ಕಾಪನಹಳ್ಳಿ
ಕೆ.ಆರ್.ಪೇಟೆ ೧೯೯೦ [೦೧-೦೫-೯೦ ರಿಂದ ೦೭-೦೫-೯೦]

೫. ಮರೇಗುದ್ದಿ ೧೯೯೧ [೦೧-೦೫-೯೧ ರಿಂದ ೦೭-೦೫-೯೧]

೬. ಮಲ್ಲಾಪುರ ೧೯೯೩ [೦೯-೦೫-೯೩ ರಿಂದ ೧೬-೦೫-೯೩]

**ಯುವಕರ ಶಿಬಿರ :**

೧. ಕುಂಬಳೂರು ೧೯೯೦ [೨೨-೧೦-೯೦ ರಿಂದ ೨೮-೧೦-೯೦]

**ಮಹಿಳಾ ಶಿವಾನುಭವ ಶಿಬಿರ :**

**[ಬಸವಬಳಗ ದಾವಣಗೆರೆ ಇವರ ಸಹಯೋಗ]**

೧. ದಾವಣಗೆರೆ ೧೯೯೯ [೦೩-೧೦-೯೯ ರಿಂದ ೦೮-೧೦-೯೯]

೨. ದಾವಣಗೆರೆ ೨೦೦೦ [೧೫-೦೫-೨೦೦೦ ರಿಂದ ೨೧-೦೫-೨೦೦೦]

೩. ದಾವಣಗೆರೆ ೨೦೦೧ [೧೪-೦೫-೦೧ ರಿಂದ ೧೮-೦೫-೦೧]

**ಮಕ್ಕಳ ಶಿಬಿರ :**

೧. ಲಿಂಗಸಗೂರ-ಛಾವಣಿ ೧೯೯೫ [ಮೇ ೧೬, ೧೭, ೧೮]

೨. ದಾವಣಗೆರೆ ೨೦೦೦ [ಮೇ ತಿಂಗಳಲ್ಲಿ]

**ಶ್ರೀ ಬಸವೇಶ್ವರ ವಚನ ಪಾಠಶಾಲೆಗಳ ಪ್ರಾರಂಭ :**

ಬಸವಾದಿ ಶರಣರ ವಚನಗಳು ಬಾಲ್ಯದಲ್ಲಿಯೇ ಮಕ್ಕಳ ಮುಗ್ಧ ಮನಸ್ಸಿನಲ್ಲಿ ಬಿಂಬಿಸಲ್ಪಟ್ಟರೆ; ಮಕ್ಕಳು ನೀತಿವಂತರೂ, ಸುಸಂಸ್ಕೃತರು, ವಿಚಾರ-ಆಚಾರ-ವಂತರೂ ಆಗಿ ಬೆಳೆದು ನಾಡಿನ ಸತ್ಪ್ರಜೆಗಳಾಗಬೇಕು ಎಂಬ ಸದುದ್ದೇಶದಿಂದ ಪೂಜ್ಯ ಮಹಾಂತ ಶಿವಯೋಗಿಗಳು ಶರಣಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾದ ಪ್ರೊ.ಸಿದ್ದಣ್ಣ ಲಂಗೋಟಿ ಅವರು ಚಿಂತನ ನಡೆಸಿ, ವಿನಂತಿಸಿದಾಗ ಶ್ರೀಮಠದಲ್ಲಿ ಅನುಭಾವಿಗಳ ಸಭೆ ಕರೆದು ವಚನ ಪಾಠಶಾಲೆಗಳನ್ನು ಪ್ರಾರಂಭಿಸಲು ನಿರ್ಧರಿಸಿದರು. ಚಿತ್ತರಗಿ ಸಂಸ್ಥಾನ-ಮಠ ಇಳಕಲ್ಲದ ಎಲ್ಲ ಶಾಖಾಮಠಗಳಲ್ಲಿ ಶ್ರೀ ಬಸವೇಶ್ವರ ವಚನಪಾಠಶಾಲೆಗಳನ್ನು ೧೯೮೧ ರಿಂದ ಪ್ರಾರಂಭಿಸಿದರು.

**ಶ್ರೀ ಮಠದ ಗದ್ದುಗೆಗಳ ಮೇಲೆ ವಚನ ಗ್ರಂಥಗಳು :**

ಚಿತ್ತರಗಿ ಪೀಠದ ಎಲ್ಲಾ ಮಠಗಳಲ್ಲಿರುವ ಗುದ್ದುಗೆಗಳ ಮೇಲೆ ಲಿಂಗವಂತ ಧರ್ಮ ಗ್ರಂಥವಾಗಿರುವ ಬಸವಾದಿ ಶರಣರ ವಚನಗ್ರಂಥಗಳನ್ನು ಸ್ಥಾಪಿಸಲಾಗಿದೆ. ಪೂಜ್ಯರು ಅಪ್ಪಣೆ ಮಾಡಿದ ಪ್ರಕಾರ- " ಶ್ರೀ ವಿಜಯ ಮಹಾಂತ ಶಿವಯೋಗಿಗಳು ಅಪ್ಪನವರ ವಚನಗಳೆಂದು ನಿರಂತರ ಪಾರಾಯಣ ಮಾಡುತ್ತಿದ್ದರು. ವಚನಗಳ ಅನುಭಾವವನ್ನು ಭಕ್ತರಿಗೆ ಬೋಧಿಸುತ್ತಿದ್ದರು. ಅಂತಹ ಶಿವಯೋಗಿಗಳಿಗೆ ಪ್ರಾಣಸ್ವರೂಪವಾಗಿರುವ ವಚನಗಳ ಪಠಣ, ಪಾರಾಯಣ, ವಚನಾಭಿಷೇಕ ಶ್ರೀ ಮಠದ ಗದ್ದುಗೆಗಳ ದರ್ಶನಕ್ಕೆ ಬರುವ ಭಕ್ತರಲ್ಲಿ ನಡೆಯಬೇಕು" ಎಂದು ಪೂಜ್ಯ ಮಹಾಂತ ಶಿವಯೋಗಿಗಳವರು ಈ ಪರಿವರ್ತನೆಯನ್ನು ತಂದರು.

**ಜಾತ್ರಾ ಮಹೋತ್ಸವಗಳು-ಶರಣ ಸಂಸ್ಕೃತಿ ಮಹೋತ್ಸವಗಳಾಗಿ ಆಚರಣೆ :**

ಪೂಜ್ಯ ಮಹಾಂತ ಶಿವಯೋಗಿಗಳವರು ಚಿತ್ತರಗಿ ಪೀಠದ ಎಲ್ಲ ಶಾಖಾ ಮಠಗಳಲ್ಲಿ ಪ್ರತಿವರುಷ ನಡೆಯುವ ಜಾತ್ರಮಹೋತ್ಸವಗಳಿಗೆ ಶರಣಸಂಸ್ಕೃತಿಯ ಹೊಸ ಪರಿವರ್ತನೆಯನ್ನು ತಂದರು. ಜಾತ್ರಾಮಹೋತ್ಸವಗಳು ಶರಣಸಂಸ್ಕೃತಿಯ ಮಹೋತ್ಸವಗಳಾಗಿ ಮಾರ್ಪಾಟುಗೊಂಡಿವೆ. ಅಡ್ಡಪಲ್ಲಕ್ಕಿಯಲ್ಲಿ ಧರ್ಮಗ್ರಂಥ ವಚನ ಕಟ್ಟುಗಳನ್ನು ಇಟ್ಟು ಉತ್ಸವ ಮಾಡುತ್ತಾರೆ. ವಿಶ್ವ ಬಸವಧರ್ಮ ಸಮಾವೇಶ ಜರುಗುತ್ತದೆ.

**ಬಸವಕೇಂದ್ರಗಳ ಸ್ಥಾಪನೆ :**

ಪೂಜ್ಯ ಮಹಾಂತ ಶಿವಯೋಗಿಗಳ ಸಾನಿದ್ಯದಲ್ಲಿ ಜನೇವರಿ ೧೪, ೧೯೬೭ ರ ರಾತ್ರಿ ಪ್ರೊ. ಸಿದ್ದಣ್ಣ ಲಂಗೋಟಿಯವರು ಚಿತ್ತರಗಿ ಮಠದಲ್ಲಿಯೇ ಬಸವಕೇಂದ್ರ ಎಂಬ ಹೆಸರಿನ ಹೊಸ ಸಂಘಟನೆಯ ರೂಪುರೇಷೆ ಸಿದ್ದಗೊಳಿಸಿದರು. ಬಸವದಳ ಸಂಘಟನೆಯ ತತ್ವನಿಷ್ಠರು ಒಂದಾಗಿ ಕಾರ್ಯ ಮಾಡಬೇಕೆಂದು ಚಿಂತನೆ ನಡೆಸಿ ಮರುದಿನ ಬೆಳಿಗ್ಗೆ ಜನೇವರಿ ೧೫, ೧೯೬೭ ರಂದು ಚಿತ್ತರಗಿ ಮಠದಲ್ಲಿ ಬಸವಕೇಂದ್ರ ಪ್ರಾರಂಭಿಸಲಾಯಿತು. ಅಂದು ಪೂಜ್ಯ ವಿ. ಸಿದ್ಧರಾಮಣ್ಣ ಶರಣರು, ಪ್ರೊ. ವಿ.ವಿ.ಸಂಗಮದ, ಶ್ರೀ ಪ.ಮ.ಗುರುಲಿಂಗಯ್ಯ ಮುಂತಾದವ-ರೊಂದಿಗೆ ಪೂಜ್ಯರ ಸಮ್ಮುಖದಲ್ಲಿ ಸುಧೀರ್ಘ ಚರ್ಚೆ ನಡೆಸಲಾಯಿತು. ಅನಂತರ ಪ್ರೊ. ವಿ.ವಿ.ಸಂಗಮದ ಅವರ ಸಲಹೆಯಂತೆ ಚಿತ್ರದುರ್ಗ ಮುರಾಘಾಮಠದಲ್ಲಿ ಎರಡು ಸಲ ಬಸವ ಭಕ್ತರ ಸಭೆ ಕರೆದು ಗದಗ, ಇಳಕಲ್ಲ, ಭಾಲ್ಕಿ, ಹುಲಸೂರು ಮುಂತಾದ ಪೂಜ್ಯರು ಹಾಗೂ ಶರಣರೆಲ್ಲ ಚಿಂತನ ನಡೆಸಿ ಬಸವಕೇಂದ್ರಗಳನ್ನು ಚಿತ್ರದುರ್ಗದ ನೂತನ ಜಗದ್ಗುರುಗಳ ನೇತೃತ್ವದಲ್ಲಿ ನಾಡಿನಾದ್ಯಂತ ಸ್ಥಾಪಿಸಲು ನಿರ್ಧರಿಸಲಾಯಿತು. ಈ ಬಸವಕೇಂದ್ರಗಳ ಕೇಂದ್ರ ಕಾರ್ಯಾಲಯವು ಧರ್ಮಕೇಂದ್ರ, ಬಸವ ಕಲ್ಯಾಣ ಅನುಭವ ಮಂಟಪವಾಗಿರಬೇಕು. ಕಾರ್ಯ ನಿರ್ವಾಹಕ ಕೇಂದ್ರ ಕಾರ್ಯಾಲಯವು ಚಿತ್ರದುರ್ಗ ಬೃಹನ್ಮಠವಾಗಬೇಕು ಎಂದು ನಿರ್ಧರಿಸಿ ಎಲ್ಲ ಪೂಜ್ಯರು, ಶರಣರು, ಅನುಭಾವಿಗಳು ಸಕ್ರೀಯವಾಗಿ ಚಿತ್ರದುರ್ಗದ ಪೂಜ್ಯ ಶ್ರೀ ಮುರಾಘ ಶರಣರೊಂದಿಗೆ ಸಹಕರಿಸುತ್ತಾ ಬಸವಕೇಂದ್ರ ಪ್ರಾರಂಭ ಬೆಳವಣಿಗೆಗಳಿಗೆ ಕಾರಣರಾದರು. ಜಮುರಾ ಕಲಾವಿದರ ರೂಪಕಗಳು, ಶ್ರೀ ತೋಟಪ್ಪ ಉತ್ತಂಗಿಯವರ ಹಾಗೂ ಸಂಗಡಿಗರ ವಚನ ಸಂಗೀತದೊಂದಿಗೆ ಪೂಜ್ಯ ಚಿತ್ರದುರ್ಗ ಜಗದ್ಗುರುಗಳು ಅಹರ್ನಿಶ, ಅವಿಶ್ರಾಂತ ಪರಿಶ್ರಮದಿಂದ ಇಂದು ದೇಶ ವಿದೇಶಗಳಲ್ಲಿ ಸಾವಿರಾರು ಬಸವಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ.

**ಮನೆಯಲ್ಲಿ ಮಹಾಮನೆ ಕಾರ್ಯಕ್ರಮಗಳು :**

'ಭಕ್ತರ ಮನೆಗಳೆಲ್ಲಾ ಮಠಂಗಳಯ್ಯಾ' ಎಂಬ ಬಸವಗುರು ವಾಣಿಯನ್ನು ಅನುಷ್ಠಾನಗೊಳಿಸುವ ದೃಷ್ಟಿಯಿಂದ ನಾಡಿನಾದ್ಯಂತ ಚರಜಂಗಮವಾಗಿ

ಸಂಚರಿಸುತ್ತಾ ಭಕ್ತರ 'ಮನೆಗಳಲ್ಲಿ ಮಹಾಮನೆ' ಕಾರ್ಯಕ್ರಮ ಜರುಗಿಸಿಕೊಂಡು ಬರುತ್ತಿದ್ದಾರೆ.

**ನೂತನ ಮನೆಗಳ ಗುರುಪ್ರವೇಶ ಸಮಾರಂಭ :**

ಭಕ್ತರು ಹೊಸದಾಗಿ ಕಟ್ಟಿಸಿರುವ ಮನೆಗಳು, ವ್ಯಾಪರದ ಅಂಗಡಿ, ಸಂಕೀರ್ಣಗಳ ಪ್ರವೇಶ ಸಮಾರಂಭಗಳಲ್ಲಿ ಇಲ್ಲಿಯವರೆಗೆ ನಡೆಯುತ್ತಾ ಬಂದಿದ್ದ ನವಗ್ರಹ ಪೂಜೆ, ಶನಿಪೂಜೆ, ಲಕ್ಷ್ಮೀ ಫೋಟೋ ಪೂಜೆ, ಕೊಡ-ತಂಬಿಗೆ ಕಾಯಿ ಪೂಜೆ ಮುಂತಾದ ಜಡವೈದಿಕ ಪೌರೋಹಿತ್ಯದ ಶೋಷಣೆಯನ್ನು ದೂರೀಕರಿಸಿ, ಪೂಜ್ಯ ಮಹಾಂತ ಶಿವಯೋಗಿಗಳವರು "ನೂತನ ಮನೆಗಳಲ್ಲಿ ಗುರುಪ್ರವೇಶ" ಕಾರ್ಯಕ್ರಮಗಳ ವಚನ ಅನುಭಾವ ಪರಿಪಾಠವನ್ನು ಸಮಾಜಕ್ಕೆ ಮಾ[illegible] ತೋರಿಸಿದರು.

**ಬಸವತತ್ವಾಧಾರಿತ ಕಲ್ಯಾಣ ಮಹೋತ್ಸವಗಳು :**

'ಎಮ್ಮವರು ಬೆಸಗೊಂಡರೆ ಶುಭ ಲಗ್ನವೆನ್ನಿರಯ್ಯಾ' ಎಂಬ ಬಸವಗುರು ವಾಣಿಯನ್ನು ಕೃತಿರೂಪಕ್ಕೆ ತಂದವರು ಪೂಜ್ಯ ಮಹಾಂತ ಶಿವಯೋಗಿಗಳು. ಅವೈಜ್ಞಾನಿಕವಾದ ಪಂಚಾಂಗ, ಜ್ಯೋತಿಷ್ಯಗಳ, ಅಜ್ಞಾನಜನ್ಯವಾಗಿರುವ ಮೂಢ ಸಂಪ್ರದಾಯಗಳನ್ನು ತ್ಯಜಿಸಿ ಲಿಂಗವಂತರಿಗೆ ಯಾವುದೇ ಅಮಂಗಲ, ಅಶುಭಗಳಿಲ್ಲ ಎಂಬುದನ್ನು ತಿಳಿಸುತ್ತಾ, ಗುರುಲಿಂಗಜಂಗಮ ಪೂಜಕರಿಗೆ ಸರ್ವವೂ ಶುಭಸಮಯ, 'ಕೂಡಸಂಗನ ಪೂಜಿಸಿದ ಫಲ ಅಂಗೈ ಮೇಲೆ' ಇದೆ ಎಂದು ತಿಳಿಹೇಳುತ್ತಾ ಬಂದವರು ಶ್ರೀಗಳವರು. ಬಸವತ್ವಾಧಾರಿತ ಕಲ್ಯಾಣಮಹೋತ್ಸವಗಳಲ್ಲಿ ಜಂಗಮಲಿಂಗದ ವಚನಮಂತ್ರಗಳೊಂದಿಗೆ ಸರಳವಾದ, ವರದಕ್ಷಿಣೆರಹಿತವಾದ ವಿವಾಹಗಳನ್ನು ಪೂಜ್ಯರು ಜಾರಿಗೆ ತಂದಿದ್ದಾರೆ.

ಈ ಕಲ್ಯಾಣಮಹೋತ್ಸವಗಳಲ್ಲಿ ಅಪ್ಪಾಯನ ಪ್ರಸಾದವಾಗಿರುವ ಅಕ್ಕಿ, ಜೋಳ ಚೆಲ್ಲಿ ಕಾಲಲ್ಲಿ ತುಳಿದು ಹಾಳು ಮಾಡುವದನ್ನು ಪರಿವರ್ತಿಸಿ ಪೂಜ್ಯರು **ಪುಷ್ಪ ವೃಷ್ಟಿ** ಮಾಡಿಸುವ ಮೂಲಕ ಕಲ್ಯಾಣಮಹೋತ್ಸವವನ್ನು ಶರಣಸಂಸ್ಕೃತಿಯ ಮೂಲಕ ನೆರವೇರಿಸುತ್ತಿದ್ದಾರೆ. ಇದೇ ಸಂದರ್ಭದಲ್ಲಿ ಭಕ್ತರು ತಮ್ಮ ಶಕ್ತ್ಯಾನುಸಾರ ಬಸವಾದಿ ಶರಣರ ವಚನಗ್ರಂಥಗಳನ್ನು ಪ್ರಕಟಿಸಿ **'ವಚನತಾಂಬೂಲ'** ಎಂದು ಜ್ಞಾನದಾಸೋಹ ಗೈಯುವ, ತನ್ಮೂಲಕ ಬಸವತತ್ವ ಪ್ರಸಾರದ ಕಾರ್ಯವನ್ನೂ ಸಹ ಪೂಜ್ಯರು ಜಾರಿಗೆ ತಂದಿರುವುದು. ಪೂಜ್ಯರಲ್ಲಿದ್ದ ಪ್ರಗತಿಪರ ಚಿಂತನವನ್ನು ಕಾಣಬಹುದಾಗಿದೆ.

**ಜಂಗಮದಾಸೋಹ ನಿಧಿ ಯೋಜನೆ :**

ಸಾಂಪ್ರದಾಯಿಕವಾಗಿ ನಡೆದು ಬಂದಿದ್ದ ರುದ್ರಾಭಿಷೇಕ ಗದ್ದುಗೆ ಅಭಿಷೇಕ-ಪೂಜೆಗಳಿಗಾಗಿ ಲಕ್ಷಾಂತರ ರೂಪಾಯಿ ಭಕ್ತರಿಂದ ಸಂಗ್ರಹಿಸಿ ಸ್ಥಾಯಿನಿಧಿ

ಇಟ್ಟು, ಮಠ ಮಾನ್ಯಗಳಲ್ಲಿ ನಡೆಯಿಸಿಕೊಂಡು ಬರುತ್ತಿದ್ದ ಜಡಶೈವದ ಸಂಪ್ರದಾಯಗಳಿಗೆ ತಿಲಾಂಜಲಿ ಕೊಟ್ಟು, 'ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು' ಎಂಬ ಬಸವತತ್ವದ ಸಂದೇಶವನ್ನು ಆಚರಣೆಗೆ ತರಲೋಸುಗ ಪೂಜ್ಯ ಮಹಾಂತ ಶಿವಯೋಗಿಗಳವರು ತಮ್ಮ ಶಾಖಾ ಮಠಗಳಲ್ಲಿ 'ಜಂಗಮದಾಸೋಹ ನಿಧಿ ಯೋಜನೆ' ಎಂದು ಪರಿವರ್ತನೆ ತಂದು, ಭಕ್ತರು ಇಟ್ಟಿರುವ ಸ್ಥಾಯೀ ನಿಧಿಯಲ್ಲಿ ಶ್ರೀ ಮಠಗಳಲ್ಲಿ ನಿರಂತರವಾಗಿ 'ಅನ್ನ ದಾಸೋಹ' ನಡೆಯುವಂತೆ ಮಾಡಿರುವರು. ಗದ್ದುಗೆ ಸ್ಥಳಗಳಲ್ಲಿ ವಚನ ಪಾರಾಯಣ ನಡೆಸಿದರು.

**ಕಾಯಕ ಸಂಜೀವಿನಿ ಸಂಸ್ಥೆ :**

'ಸಮಾಜದಲ್ಲಿ ನಿರುದ್ಯೋಗ ಸಮಸ್ಯೆಯ ನಿವಾರಣೆಗಾಗಿ, ಪೂಜ್ಯ ಶ್ರೀಗಳವರು ೧೯೮೯ರಲ್ಲಿ ಕಾಯಕ ಸಂಜೀವಿನಿ ಸಂಸ್ಥೆ'ಯನ್ನು ಹುಟ್ಟು ಹಾಕಿದರು. ಲಕ್ಷಾಂತರ ರೂಪಾಯಿ ಬಂಡವಾಳದಲ್ಲಿ ಪ್ರತಿವರುಷ ಬಡ್ಡಿ ರಹಿತ ಸಾಲರೂಪದಲ್ಲಿ ನಿರುದ್ಯೋಗಿ ಯುವಕ-ಯುವತಿಯರಿಗೆ, ಅಸಹಾಯಕ ವಿಧವೆಯರಿಗೆ, ಬಡ ಕೈ ಕಸಬುದಾರರಿಗೆ ಹೊಲಿಗೆಯಂತ್ರಗಳು, ಸೈಕಲ್ ರಿಕ್ಷಾ, ಟಾಂಗಾ ಮುಂತಾದ ಯಂತ್ರೋಪಕರಣಗಳನ್ನು ವಿತರಿಸುವ ಕಾಯಕ ಸಂಜೀವಿನಿ ಯೋಜನೆ ನಡೆಯಿಸಿಕೊಂಡು ಬಂದರು. ಈಗಾಗಲೇ ನೂರಾರು ಜನ ಕಾಯಕ ಜೀವಿಗಳಾಗಿ ಸ್ವಾವಲಂಬನೆಯ ಜೀವನ ಸಾಗಿಸುತ್ತಿದ್ದಾರೆ.

**ಲಿಂಗವಂತ ಧರ್ಮ ಗ್ರಂಥ ಬಹುಮಾನ ಯೋಜನೆ :**

ಬಸವ ಪ್ರಣೀತ ಲಿಂಗವಂತಧರ್ಮ-ಸಾಹಿತ್ಯ-ಸಂಸ್ಕೃತಿ ಕುರಿತು ಪ್ರಕಟವಾಗುತ್ತಿರುವ ಉತ್ತಮ ಸಾಹಿತ್ಯ ಕೃತಿಗಳಿಗೆ ಪ್ರತಿ ವರುಷ ಪುರಸ್ಕಾರ ನೀಡುವ ಹಾಗೂ ಶರಣಸಾಹಿತಿಗಳಿಗೆ ಗೌರವಿಸುವ ಲಿಂಗವಂತ ಧರ್ಮಗ್ರಂಥ ಬಹುಮಾನ ಯೋಜನೆಯನ್ನು ಪೂಜ್ಯರು ೧೯೮೦ ರಿಂದ ಕಾರ್ಯರೂಪಕ್ಕೆ ತಂದರು.

**ಬಸವಗುರು ಕಾರುಣ್ಯ ಪ್ರಶಸ್ತಿ :**

ಬಸವತತ್ವ ಪ್ರಸಾರ, ಶರಣ ಸಂಸ್ಕೃತಿಗಾಗಿ ಶ್ರಮಿಸುತ್ತಿರುವ ಹಿರಿಯರಿಗೆ ಬಸವಗುರು ಕಾರುಣ್ಯ ಪ್ರಶಸ್ತಿ ನೀಡಿ ಪೂಜ್ಯರು ೧೯೯೨ ರಿಂದ ಗೌರವಿಸುತ್ತಾ ಬಂದರು.

**ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ :**

ಪೂಜ್ಯ ಮಹಾಂತ ಶಿವಯೋಗಿಗಳವರು ಶರಣ ಸಾಹಿತ್ಯ-ಧರ್ಮ-ಸಂಸ್ಕೃತಿ ಪ್ರಸಾರದ ಧ್ಯೇಯವಿರಿಸಿಕೊಂಡು 'ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ' ಎಂಬ ಪ್ರಕಾಶನದ ಮೂಲಕ ೧೦೦ಕ್ಕೂ ಮೇಲ್ಪಟ್ಟು

ಗ್ರಂಥಗಳ, ಸಂಶೋಧನಾ ಗ್ರಂಥಗಳನ್ನು ಪ್ರಕಟಿಸಿ ಹತ್ತಾರು ಲಕ್ಷ ರೂಪಾಯಿಗಳ ಜ್ಞಾನ ದಾಸೋಹ ನಡೆಸಿದ್ದಾರೆ.

**ವಚನಗ್ರಂಥಗಳ ಪ್ರಕಟಣೆ-ಪ್ರಸಾರ ಯೋಜನೆ :**

ಪೂಜ್ಯ ಮಹಾಂತ ಶಿವಯೋಗಿಗಳು ೧೯೮೫ರಲ್ಲಿ ನಾಡಿನ ಜನ-ಸಾಮಾನ್ಯರಿಗೆ, ಯುವ ಪೀಳಿಗೆಗೆ, ಚಿಕ್ಕಮಕ್ಕಳಿಗೆ ಅನುಕೂಲವಾಗುವ ರೀತಿಯಲ್ಲಿ ಜೇಬು ಆವೃತ್ತಿಯಲ್ಲಿ ವಚನ ಗ್ರಂಥಗಳ ಪ್ರಕಟಣೆ ಪ್ರಸಾರ ಯೋಜನೆ' ರೂಪಿಸಿದರು. ಶರಣದಂಪತಿಗಳಾದ ಪ್ರೊ ಸಿದ್ದಣ್ಣ ಲಂಗೋಟಿ ಹಾಗೂ ಡಾ.ಕಲ್ಯಾಣಮ್ಮ ಲಂಗೋಟಿ ಅವರಿಗೆ ಬಸವಾದಿ ಶರಣರ ವಚನಗಳನ್ನು ಸಂಪಾದಿಸಿ ಕೊಡಲು ಅಪ್ಪಣೆ ಮಾಡಿದರು. ಪೂಜ್ಯರ ಸದಿಚ್ಛೆಯಂತೆ ಈ ಯೋಜನೆಯಲ್ಲಿ ವಿಶ್ವಗುರು ಬಸವಣ್ಣವರು ವಚನಗಳು, ಅಲ್ಲಮಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ, ಶಿವಶರಣೆಯರು, ಸಿದ್ಧರಾಮೇಶ್ವರರು, ನೀಲಾಂಬಿಕೆ, ಜೇಡರ ದಾಸಿಮಯ್ಯ-ದುಗ್ಗಳೆ ಮುಂತಾದ ಶರಣ ಶರಣೆಯರ ಕುರಿತಾದ ವಚನಗ್ರಂಥಗಳು ಪ್ರಕಟವಾಗಿವೆ. ಒಂದು ಲಕ್ಷ ಐವತ್ತು ಸಾವಿರ ಮೇಲ್ಪಟ್ಟ ಪುಸ್ತಿಕೆಗಳು ಪ್ರಕಟವಾಗಿ, ನಾಡಿನಾದ್ಯಂತ ಜನಮಾನಸಕ್ಕೆ ತಲುಪಿವೆ.

**ಬಸವ ಬೆಳಗು ಪತ್ರಿಕೆ ಪ್ರಾರಂಭ :**

ನಿರಂಜನ ಶರಣ ಹರ್ಡೇಕರ ಮಂಜಪ್ಪನವರ ಜನ್ಮ ಶತಮಾನೋತ್ಸವ-ವನ್ನು ೧೯೮೬ ಅಕ್ಟೋಬರ್ ೧೬ ರಿಂದ ೨೫ರ ವರೆಗೆ ಪ್ರಥಮತಃ ಆಚರಿಸಿದ ಕೀರ್ತಿಯು ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳಿಗೆ ಸಲ್ಲುತ್ತದೆ. ದಾವಣಗೆರೆಯಲ್ಲಿ ಬಸವ ಬಳಗದ ಆಶ್ರಯದಲ್ಲಿ ಶತಮಾನೋತ್ಸವ ಹಾಗೂ ಶಿವಾನುಭವ ಶಿಬಿರ ಸಂಘಟಿಸಿ ಶ್ರೀ ಮಂಜಪ್ಪನವರು ನಡೆಸಿಕೊಂಡು ಬಂದಿದ್ದ ಶರಣ ಸಂದೇಶ ಪತ್ರಿಕೆಯನ್ನೇ 'ಬಸವ ಬೆಳಗು' ಎಂಬ ಹೊಸ ಹೆಸರಿನಲ್ಲಿ ಪ್ರಕಟಿಸಿ ನಿರಂತರವಾಗಿ ಶ್ರೀ ಮಠದಿಂದ ಕಳೆದ ೩೨ ವರುಷಗಳಿಂದ ನಡೆಸಿಕೊಂಡು ಬರುತ್ತಿದ್ದಾರೆ. ಶರಣಸಾಹಿತಿ ಪ್ರೊ.ಸಿದ್ದಣ್ಣ ಲಂಗೋಟಿ ಅವರ ಗೌ.ಸಂಪಾದಕತ್ವದಲ್ಲಿ, ೨೦ ಜನ ಅನುಭಾವಿ ಶರಣ-ಶರಣೆಯರ ಸಂಪಾದಕ ಸಲಹಾ ಸಮಿತಿಯ ಸಹಕಾರ, ಪೂಜ್ಯರ ಮಾರ್ಗದರ್ಶನದಲ್ಲಿ ಪತ್ರಿಕೆಯು ಬಸವತತ್ವ ಪ್ರಸಾರದ ಮಾಧ್ಯಮವಾಗಿ ಹೊರಬರುತ್ತಿದೆ.

**ಇಷ್ಟಲಿಂಗ ದೀಕ್ಷೆ ಹಾಗೂ ೫ ಲಕ್ಷ ಲಿಂಗಗಳ (ಉಚಿತ) ಧಾರಣೆ :**

ಪೂಜ್ಯ ಮಹಾಂತ ಶಿವಯೋಗಿಗಳು ಚಿತ್ತರಗಿ ಪೀಠದ ಅಧಿಪತಿಗಳಾದ ಈ ೪೮ ವರುಷಗಳಲ್ಲಿ (೧೯೭೦ ರಿಂದ ೨೦೧೮) ೫ ಲಕ್ಷ ಮೇಲ್ಪಟ್ಟು ಇಷ್ಟಲಿಂಗಗಳನ್ನು ಉಚಿತವಾಗಿ ದೀಕ್ಷಾ ಸಂಸ್ಕಾರದ ಮೂಲಕ ದಾಸೋಹಗೈದಿದ್ದಾರೆ. ಲಕ್ಷಾಂತರ ರುದ್ರಾಕ್ಷಿಗಳನ್ನು, ಸಹಸ್ರಾರು ಮೇಲ್ಪಟ್ಟ ಕ್ರಿಯಾ ಭಸ್ಮಗಳನ್ನು ಕರುಣಿಸಿದ್ದಾರೆ.

ಕರ್ನಾಟಕ-ತಮಿಳುನಾಡು-ಕೇರಳ-ಆಂದ್ರ-ಮಹಾರಾಷ್ಟ್ರ, ದಿಲ್ಲಿ, ಉತ್ತರ ಭಾರತ, ಪಾಶ್ಚಿಮಾತ್ಯ ದೇಶಗಳಲ್ಲಿ ಜಂಗಮವಾಗಿ ಸಂಚರಿಸಿ-ಕಾಯಕಗೈದಿದ್ದಾರೆ.

**ಲಿಂಗವಂತ ಧರ್ಮ ಕೇಂದ್ರ ಅನುಭವ ಮಂಟಪ-ದಾಸೋಹಕ್ಕಾಗಿ ಬಸವ ಸಂದೇಶ ಯಾತ್ರೆ :**

ಲಿಂಗಾಯತ ಧರ್ಮ ಕೇಂದ್ರ ಬಸವ ಕಲ್ಯಾಣದ ಅನುಭವ ಮಂಟಪದಲ್ಲಿ ನಿರಂತರವಾಗಿ ಪ್ರಸಾದ ದಾಸೋಹ ಜರುಗಬೇಕು. ಕಲ್ಯಾಣಕ್ಕೆ ಬರುವ ಭಕ್ತರಿಗಾಗಿ ವಸತಿ ಸೌಕರ್ಯಗಳಾಗಬೇಕು ಎಂಬ ಸದುದ್ದೇಶದಿಂದ ಪೂಜ್ಯ ಮಹಾಂತ ಶಿವಯೋಗಿಗಳು, ವಿಶ್ವಬಸವ ಧರ್ಮ ಟ್ರಸ್ಟ (ರಿ) ಅನುಭವ ಮಂಟಪ ಬಸವ ಕಲ್ಯಾಣ ಇವರ ಪ್ರಾರ್ಥನೆಯಂತೆ ದಿನಾಂಕ: ೨೫-೦೩-೧೯೯೫ ರಿಂದ ೦೨-೦೫-೧೯೯೫ ವರೆಗೆ ಒಟ್ಟು ೪೦ ದಿನಗಳವರೆಗೆ ರಾಜ್ಯಾದ್ಯಂತ ಬಸವ ಸಂದೇಶಯಾತ್ರೆ ಕೈಗೊಂಡು ಕಲ್ಯಾಣದ ಬಸವ ದಾಸೋಹ ನಿಧಿಗೆ ೭-೮ ಲಕ್ಷ ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿ ಅರ್ಪಿಸಿದರು. ಪೂಜ್ಯ ಶತಾಯುಷಿ ಭಾಲ್ಕಿ ಹಿರೇಮಠದ ಪೂಜ್ಯ ಶ್ರೀ ಮಘಚ. ಚನ್ನಬಸವ ಪಟ್ಟದೇವರ ಸತ್‌ಸಂಕಲ್ಪವನ್ನು ಈಡೇರಿಸಿದರು.

**ವಿಮೋಚನಾ ದೇವದಾಸಿ ಪುನರ್ವಸತಿ ಸಂಸ್ಥೆಗೆ ಮಾರ್ಗದರ್ಶನ :**

ಬಸವತತ್ವ ಅನುಷ್ಠಾನದ ಮಹತ್ವದ ಅಂಗವಾಗಿರುವ, ದೇವದಾಸಿಯರ ಬಾಳಿಗೆ ಬೆಳಕು ನೀಡುವ, ದೇವದಾಸಿಯರ ಮಕ್ಕಳಿಗೆ ಸಂಸ್ಕಾರಯುತ ಶಿಕ್ಷಣ ನೀಡುವ ಸದುದ್ದೇಶದಿಂದ ಅಥಣಿಯ ಶ್ರೀ ಬಿ.ಎಲ್.ಪಾಟೀಲ ವಕೀಲರಿಗೆ ಮಾರ್ಗದರ್ಶನ ನೀಡಿ 'ವಿಮೋಚನಾ' ಸಂಸ್ಥೆಯು ಅಸ್ತಿತ್ವಕ್ಕೆ ಬರುವಂತೆ ಕಾರ್ಯಗೈದವರು ಪೂಜ್ಯ ಮಹಾಂತ ಶಿವಯೋಗಿಗಳವರು (೧೯೮೫).

ಈ ವಿಮೋಚನಾ ಸಂಸ್ಥೆಯ ವಸತಿ ಸಹಿತಾ ಶಾಲೆ-ಹೈಸ್ಕೂಲ್‌ದಲ್ಲಿ ಶಿಕ್ಷಣ ಪಡೆಯುವ ದೇವದಾಸಿ ಮಕ್ಕಳಿಗಾಗಿ, ಬಡ ಮಕ್ಕಳಿಗಾಗಿ **ಶ್ರೀ ಗುರುಬಸವ ಪ್ರಸಾದ ಟ್ರಸ್ಟನ್ನು** ೧೯೯೫ರಲ್ಲಿ ಪ್ರಾರಂಭಿಸಿ ಪೂಜ್ಯ ಶ್ರೀಗಳವರು ಅಧ್ಯಕ್ಷರಾಗಿ ದಾಸೋಹ ವ್ಯವಸ್ಥೆ ಕಲ್ಪಿಸಿದ್ದಾರೆ. ವಿಮೋಚನಾ ಸಂಸ್ಥೆಯ ದೇವದಾಸಿ ಮಕ್ಕಳಿಗೆ ಬಸವ ಧರ್ಮದ ಸಂಸ್ಕಾರ-ಸಂಸ್ಕೃತಿಯನ್ನಿತ್ತು ಸುಸಂಸ್ಕೃತ ನಾಗರೀಕರಾಗುವಂತೆ ಪೂಜ್ಯರು ಶ್ರೀ ಬಿ.ಎಲ್.ಪಾಟೀಲ, ಶ್ರೀ ವ್ಹಿ.ಎಸ್.ಮನವಾಡೆ ಮುಂತಾದವರು ಹಗಲಿರುಳು ಶ್ರಮಿಸಿದ್ದಾರೆ.

**ಕಲ್ಯಾಣ ನಾಡಿನ ಶರಣಪರಿಷತ್ತಿನ ಗೌ.ಅಧ್ಯಕ್ಷರಾಗಿ ಸೇವೆ :**

ಬಸವತತ್ವ ಪ್ರಸಾರದ ಮಹಾನ್ ಧ್ಯೇಯ ಹೊಂದಿ, ನಾಡಿನಾದ್ಯಂತ ಕಲ್ಯಾಣ ನಾಡಿನ ಶರಣ ಸಮ್ಮೇಳನಗಳನ್ನು ಸಂಘಟಿಸುತ್ತಾ ಬಂದಿರುವ ಕಲ್ಯಾಣ

ನಾಡಿನ ಶರಣ ಪರಿಷತ್ತು ಬಸವಕಲ್ಯಾಣ ಈ ಸಂಸ್ಥೆಗೆ ಶತಾಯುಷಿ ಶ್ರೀ. ಮಾ. ಫ. ಚ. ಚನ್ನಬಸವ ಪಟ್ಟದೇವರು ಲಿಂಗೈಕ್ಯರಾದನಂತರ ಕಳೆದ ೧೮ ವರುಷಗಳಿಂದ ಪೂಜ್ಯ ಶ್ರೀಮನಿಪ್ರ ಮಹಾಂತ ಶಿವಯೋಗಿಗಳು ಗೌ. ಅಧ್ಯಕ್ಷರಾಗಿ ಮಾರ್ಗದರ್ಶನ ನೀಡುತ್ತಾ ಸಕ್ರಿಯವಾಗಿ ಬಸವತತ್ವ ಪ್ರಸಾರಗೈದಿದ್ದಾರೆ.

**ಬಸವ ಭೂಮಿಯಿಂದ ಆಂಗ್ಲನಾಡಿಗೆ :**

ಇಂಗ್ಲೆಂಡಿನ ವೀರಶೈವ ಸಮಾಜ ಆಫ್ ಯುನೈಟೆಡ್ ಕಿಂಗಡಮ್ [] ಇವರ ಆಮಂತ್ರಣದ ಮೇರೆಗೆ ಪೂಜ್ಯ ಶ್ರೀ ಮಹಾಂತಸ್ವಾಮಿಗಳು, ಪೂಜ್ಯಶ್ರೀ ಶಿವರುದ್ರಸ್ವಾಮಿಗಳು, ಶ್ರೀ. ಬಿ. ಎಲ್. ಪಾಟೀಲರು ಹಾಗೂ ಪ್ರೊ. ಸಿದ್ಧಣ್ಣ ಲಂಗೋಟಿಯವರು ಪಾಶ್ಚಿಮಾತ್ಯದೇಶಗಳಾದ ಇಂಗ್ಲಂಡ, ವೇಲ್ಸ್, ಸ್ಕಾಟಲ್ಯಾಂಡ್, ಐರ್ಲ್ಯಾಂಡ್, ಆ್ಯಂಗಲ್‌ಸೀ ನಡುಗಡ್ಡೆಗಳಲ್ಲಿ ವಿವಿಧ ಸಂಘಟನೆಗಳವರು ಹಮ್ಮಿಕೊಂಡಿದ್ದ 'ಬಸವ ಜಯಂತಿ' ಕಾರ್ಯಕ್ರಮಗಳಲ್ಲಿ ಕನ್ನಡ, ಇಂಗ್ಲೀಷ, ಹಿಂದಿಗಳಲ್ಲಿ ಅನುಭಾವ ನೀಡಿ ಬಸವ ಸಂದೇಶ ಸಾರಿದರು. ಇಂಗ್ಲೆಂಡ್‌ದ ಶ್ರೀ ಮುರುಘನ್ ಟೆಂಪಲ್ ಅಸೋಸಿಯೇಶನ್‌ದಲ್ಲಿ, ಭಾರತೀಯ ವಿದ್ಯಾಭವನದಲ್ಲಿ ವಿಶ್ವಹಿಂದೂ ಪರಿಷತ್‌ನಲ್ಲಿ, ಬ್ರೆಂಟ್ ಇಂಡಿಯಾ ಅಸೋಸಿಯೇಶನ್‌ದಲ್ಲಿ, ಶ್ರೀ ರಾಮಕೃಷ್ಣ ವೇದಾಂತ ಸೆಂಟರ್‌ನಲ್ಲಿ, ಹ್ಯಾರೋಎಲ್ಡರ್ ಅಸೋಸಿಯೇಶನ್‌ದಲ್ಲಿ, ವಲ್ಲಭನಿಧಿ ಸಂಸ್ಥೆಯಲ್ಲಿ, ಸೇಂಟ್ ಕ್ಲೇರ್ಸ್ ಚರ್ಚಹಾಲ್‌ನಲ್ಲಿ ಜೈನ ಅಸೋಸಿಯೇಶನ್‌ದಲ್ಲಿ, ನವರಾತ ವಣಿಕ ಸಂಘದಲ್ಲಿ ಹಾಗೂ ಆಂಗ್ಲನಾಡಿನಲ್ಲಿ ವಾಸವಾಗಿರುವ ಕನ್ನಡಿಗರು, ಗುಜರಾತಿಗಳು, ರಾಜಸ್ಥಾನಿಯರು, ತಮಿಳರು, ಮರಾಠಿಗರು, ಉತ್ತರಭಾರತದ ಹಿಂದಿ ಭಾಷಿಕರ ಮನೆಗಳಲ್ಲಿ 'ಮನೆಯಲ್ಲಿ ಮಹಾಮನೆ' ಗೋಷ್ಠಿ ಕಾರ್ಯಕ್ರಮಗಳನ್ನು ನಡೆಸಿದರು. ಅಲ್ಲಿ ಬಸವತತ್ವ ಚಿಂತನ, ಮಹಾಂತ ಜೋಳಿಗೆ, ಲಿಂಗದೀಕ್ಷಾ ಕಾರ್ಯಕ್ರಮಗಳು ಜರುಗಿದವು. ಭಾರತೀಯ ವಿದ್ಯಾಭವನದಲ್ಲಿ 'ಮಹಾಂತ ಜೋಳಿಗೆ' ಎಂಬ ಇಂಗ್ಲೀಷ ಗ್ರಂಥವನ್ನು ಶ್ರೀ ಮತ್ತೂರ ಕೃಷ್ಣಮೂರ್ತಿಯವರು ಬಿಡುಗಡೆ ಮಾಡಿದರು.

ಅಗಷ್ಟ ೧, ೧೯೯೦ರಂದು ಭಾರತಕ್ಕೆ ಮರಳಿ ಬಂದೆವು. ಅಂದು ಪೂಜ್ಯ ಮಹಾಂತಸ್ವಾಮಿಗಳವರ ೬೦ನೆಯ ಹುಟ್ಟುಹಬ್ಬವಾಗಿತ್ತು. ಮುಂಬೈ ಮಹಾನಗರದಲ್ಲಿ ಶ್ರೀ ಮನೋಹರ ಕೋರಿ ಹಾಗೂ ಬಸವಭಕ್ತರು, ಕನ್ನಡ ಸಂಘಟನೆಗಳವರು, ಭವ್ಯ ಸ್ವಾಗತ ಕಾರ್ಯಕ್ರಮ ಏರ್ಪಡಿಸಿದ್ದರು. ಅನಂತರ ಅಲ್ಲಿಂದ ಸೋಲಾಪುರ, ಹುನಗುಂದ, ಇಳಕಲ್ಲಗಳಲ್ಲಿ ಅದ್ದೂರಿ ಸ್ವಾಗತ-ಮೆರವಣಿಗೆ ಜರುಗಿಸಿ ಶ್ರೀಮಠಕ್ಕೆ ಭಕ್ತರು ಬರಮಾಡಿಕೊಂಡರು. ಇದು ಚಿತ್ತರಗಿ ಪೀಠದ ೧೯ನೆಯ ಶಿವಾನುಭವ ಚರವರ್ಯರು ಪಾಶ್ಚಿಮಾತ್ಯ ಜಗತ್ತಿಗೆ ಬಸವತತ್ವ ಸಾರಿ ಬಂದ ಐತಿಹಾಸಿಕ ಚರಿತ್ರಾರ್ಹ ಘಟನೆಯಾಗಿದೆ.

**ಲಂಡನ್ನಿನಲ್ಲಿ ಬಸವ ಇಂಟರ್‌ನ್ಯಾಶನಲ್ ಫೌಂಡೇಶನ್ ಸ್ಥಾಪನೆ :**

ಪೂಜ್ಯಶ್ರೀಗಳವರು ಹಾಗೂ ನಾವು ಇಂಗ್ಲೆಂಡಿನಲ್ಲಿ ಇದ್ದಾಗ ಶ್ರೀ ಎಸ್. ಮಹಾದೇವಯ್ಯ ಮತ್ತು ಇನ್ನಿತರರ ಪ್ರೇರಣೆಯಂತೆ ಜುಲೈ ೨೨, ೧೯೯೦ ರಂದು 'ಬಸವ ಇಂಟರ್‌ನ್ಯಾಶನಲ್ ಫೌಂಡೇಶನ್ ಲಂಡನ್' ಎಂಬ ಸಂಸ್ಥೆ ಪ್ರಾರಂಭಿಸಲಾಯಿತು. ಪೂಜ್ಯ ಮಹಾಂತ ಶಿವಯೋಗಿಗಳು ಅಧ್ಯಕ್ಷರಾಗಿ, ಶ್ರೀ ಬೇಲಿಮಠ ಶಿವರುದ್ರ ಸ್ವಾಮಿಗಳು ಉಪಾಧ್ಯಕ್ಷರಾಗಿ, ಶ್ರೀ ಬಿ.ಎಲ್.ಪಾಟೀಲ ವಕೀಲರು ಕೋಶಾಧ್ಯಕ್ಷರಾಗಿ, ಶ್ರೀ ಎಸ್.ಮಹಾದೇವಯ್ಯ ಕಾರ್ಯಾಧ್ಯಕ್ಷರಾಗಿ, ಪ್ರೊ.ಸಿದ್ದಣ್ಣ ಲಂಗೋಟಿಯವರು ಸ್ಥಾಪಕ ಕಾರ್ಯದರ್ಶಿಯಾಗಿ ಸಮಿತಿ ರಚಿಸಿ ಕಾರ್ಯ ಪ್ರಾರಂಭಿಸಲಾಯಿತು. ಈ ಸಂಸ್ಥೆಗೆ ಪೂಜ್ಯ ಮಹಾಂತ ಸ್ವಾಮಿಗಳು ಒಂದು ಲಕ್ಷ ರೂಪಾಯಿ ಮೂಲ ಧನವಾಗಿ ದೇಣಿಗೆ ನೀಡಿದರು. ಇದಲ್ಲದೇ ಇಂಗ್ಲೆಂಡಿನ ಭಕ್ತರು ಪೂಜ್ಯರಿಗೆ ನೀಡಿದ್ದ ಭಕ್ತಿ ಕಾಣಿಕೆಯ ಸಾವಿರಾರು ಪೌಂಡ ಧನವನ್ನು ಸಂಸ್ಥೆಗೆ ಪೂಜ್ಯರು ಅಶೀರ್ವಾದವಾಗಿ ನೀಡಿದರು.

**ದಲಿತ ಉತ್ತರಾಧಿಕಾರಿ ಘೋಷಣೆಯ ಪ್ರಸಂಗ :**

೧೯೯೪ನೆಯ ಇಸ್ವಿಯಲ್ಲಿ ಬೀದರದಲ್ಲಿ ಜರುಗಿದ ಕಲ್ಯಾಣನಾಡಿನ ಶರಣ ಸಮ್ಮೇಳನದಲ್ಲಿ (ಎಪ್ರೀಲ್ ೧೬, ೧೭, ೧೮) ಅಂತರ್‌ರಾಷ್ಟ್ರಿಯ **ಸ್ವಾಮಿ ಅಗ್ನಿವೇಶ** ದಲಿತ ನೇತಾರ ಶ್ರೀ ರಾಮವಿಲಾಸ ಪಾಸ್ವಾನ್ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿ, ಬಸವಣ್ಣನವರ ಕ್ರಾಂತಿಕಾರಕ ವಿಚಾರಗಳು, ದಲಿತೋದ್ಧಾರ ಕುರಿತು ಮಾತನಾಡುತ್ತಾ- "ಇಂದಿನ ಬಸವಾನುಯಾಯಿ ಮಠಾಧೀಶರು ಜಾತಿರಹಿತವಾಗಿರುವ ಲಿಂಗಾಯತಧರ್ಮದ ತಮ್ಮ ಮಠಗಳಿಗೆ ಯಾರಾದರೂ ಉತ್ತರಾಧಿಕಾರಿ ಸ್ವಾಮಿಗಳನ್ನು [ದಲಿತ ಜನಾಂಗದ ಯುವಕರನ್ನು ಆರಿಸಿಕೊಂಡು] ಮಾಡಿಕೊಂಡಿದ್ದೀರಾ? ಯಾರಾದರೂ ದಲಿತ ಜನಾಂಗದ ಯುವಕರನ್ನು ಉತ್ತರಾಧಿಕಾರಿಯಾಗಿ ಮಾಡಿಕೊಳ್ಳಲು ಸಿದ್ಧರಿದ್ದೀರಾ ? ಎಂದು ಪ್ರಶ್ನೆ ಕೇಳಿದರು. ಇದಕ್ಕೆ ಉತ್ತರ ಬರದೇ ಹೋದರೆ ನೀವು ಬಸವಣ್ಣನವರ ಅನುಯಾಯಿಗಳೇ ಅಲ್ಲಾ. ನಿಮ್ಮ ನುಡಿಯೊಂದು ಪರಿ ನಡೆಯೊಂದು ಪರಿ ಎಂದು ಹೇಳಬೇಕಾಗುತ್ತದೆ ಎಂದು ನಿಷ್ಠುರವಾಗಿ ಸವಾಲಿನ ರೀತಿಯಲ್ಲಿ ಮಾತನಾಡಿದರು.

ಈ ಸಮ್ಮೇಳನದ ವೇದಿಕೆಯ ಮೇಲೆ ನಾಲ್ವತ್ತಕ್ಕೂ ಮೇಲ್ಪಟ್ಟು ಮಠಾಧೀಶರು, ಸಮ್ಮೇಳನಾಧಕ್ಯರಾಗಿ ದಲಿತಕವಿ ಡಾ.ಸಿದ್ಧಲಿಂಗಯ್ಯ ಉಪಸ್ಥಿತರಿದ್ದರು. ಬೃಹತ್ ಸಮ್ಮೇಳನದಲ್ಲಿ ಲಕ್ಷಾಂತರ ಭಕ್ತರು ನೆರೆದಿದ್ದರು. **ಈ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಮಹಾಂತ ಶಿವಯೋಗಿಗಳು** ಬಸವಗುರು ಪ್ರೇರಣೆಯಂತೆ ಸ್ಪಷ್ಟವಾಗಿ ಉತ್ತರ ನೀಡಿದರು- '೧೨ನೆಯ ಶತಮಾನದಲ್ಲಿ ವಿಶ್ವಗುರು ಬಸವಣ್ಣನವರು ಅನುಭವ ಮಂಟಪದ ಶೂನ್ಯ ಸಿಂಹಾಸನಕ್ಕೆ ಅಲ್ಲಮಪ್ರಭುದೇವರಿಗಾಗಿ ೧೨ ವರ್ಷ ಕಾಯ್ದು ಅವರನ್ನು ಅಧಿಪತಿಯಾಗಿಸಿದ್ದರು.

ಕಾಲಾನಂತರದಲ್ಲಿ ನಾವು ತಪ್ಪಿದ್ದೇವೆ. ಇದು ನಮ್ಮ ಮಠಾಧೀಶರ ತಿಳುವಳಿಕೆಯ ತಪ್ಪೇ ವಿನಃ ನಮ್ಮ ಬಸವಧರ್ಮದ, ಸಿದ್ಧಾಂತದ ತತ್ವದ ದೋಷವಲ್ಲ. ಇಂದು ನಾವು ಸ್ಪಷ್ಟವಾಗಿ ಹೇಳುತ್ತೇವೆ ಕೇಳಿ– **'ಬಸವತತ್ವದಲಿ ಶ್ರದ್ಧೆ, ನಿಷ್ಠೆ ಹೊಂದಿರುವ ಯೋಗ್ಯ ಸಮರ್ಥ ದಲಿತ ವ್ಯಕ್ತಿ ದೊರೆತರೆ, ಇಷ್ಟಲಿಂಗ ಸಂಸ್ಕಾರ ಕೊಟ್ಟು ನಾವು ಉತ್ತರಾಧಿಕಾರಿ ಮಾಡಿಕೊಳ್ಳುತ್ತೇವೆ'** ಎಂದು ನುಡಿದಾಗ ಸಮ್ಮೇಳನದಲ್ಲಿ ಭಾಗವಹಿಸಿದ್ದ ಲಕ್ಷಾಂತರ ಭಕ್ತರು ಆನಂದದಿಂದ ಚಪ್ಪಾಳೆ ತಟ್ಟಿದರು. ಇಡೀ ಲಿಂಗಾಯತಧರ್ಮ ಸಮಾಜದ ಮಠಾಧಿಪತಿಗಳ ಗೌರವ ಹೆಚ್ಚುವಂತೆ ಮಾಡಿದರು ಮಹಾಂತ ಶಿವಯೋಗಿಗಳು.

**ನಡೆಯೊಳಗೆ ನುಡಿಯ ಪೂರೈಸಿದ ಮಹಾಂತರು :**

ಪೂಜ್ಯರ ಈ ಬಸವತತ್ವನಿಷ್ಠ ವಿಚಾರಕ್ಕೆ ಪಟ್ಟಭದ್ರ ಜಾತಿವಾದಿಗಳು ಅಲ್ಲಲ್ಲಿ ತಂತ್ರ–ಕುತಂತ್ರ ನಡೆಸಿದರು. ಹುಬ್ಬಳ್ಳಿಯ ಜಗದ್ಗುರು ಶ್ರೀ ಮೂಜಗಂ ಅವರನ್ನು ಮುಂದೆ ಮಾಡಿ ಪೂಜ್ಯರಿಗೆ ನೋವು ನೀಡಿದರು. 'ಶಿವಶರಣರ ನೋವು ಶಿವ ನೋವು, ತಾಯಿಗೆ ನೀಡಿದ ನೋವು ಗರ್ಭಸ್ಥ ಶಿಶುವಿಗೆ ತಲುಪುವಂತೆ' ಮಹಾಂತ ಶಿವಯೋಗಿಗಳಿಗೆ ನೀಡಿದ ನೋವು, ಕೆಲವೇ ವರುಷಗಳಲ್ಲಿ ಆ ಜಾತಿವಾದಿಗಳೇ ಅನುಭವಿಸುವಂತಾಯಿತು. ಸುಖ–ದುಃಖ, ನೋವು–ನಲಿವನ್ನು ಮಹಾಂತ ಅಪ್ಪಗಳು ಬಸವಪ್ರಸಾದವೆಂದು ಸ್ವೀಕರಿಸಿದರು. ಬಸವಗುರುವಿನ ಇಚ್ಛೆ ಬಲ್ಲವರಾರು ? ಸಿದ್ಧಯ್ಯನಕೋಟೆ ಮಠಕ್ಕೆ ಶ್ರೀ ಭೀಮಪ್ಪ ಮಾಸ್ತರ, ಭೋಗೇಶಗೌಡರ ಉದಾರ ದೇಣಿಗೆ, ಶ್ರೀ ಎಸ್.ಬಿ.ಮರಿಸ್ವಾಮಿ ಅವರು ೩ ಎಕರೆ ಭೂಮಿಯನ್ನು ಮಠಕ್ಕೆ ದಾನ ನೀಡಿದರು. ಈ ಹೊಸ ಶಾಖಾಮಠಕ್ಕೆ ದಲಿತ ಉತ್ತರಾಧಿಕಾರಿಯನ್ನು ಮಾಡಬೇಕೆಂದು ಪ್ರಾರ್ಥಿಸಿ ಇತಿಹಾಸ ನಿರ್ಮಿಸಿದರು. ಈ ಕಾಲಕ್ಕೆ ಶ್ರೀ ವಸಂತ ಮಾಸ್ತರ ಅವರ ಸೇವೆಯು ಸ್ಮರಣೀಯ. ಮುಂದೆ ೧೯೯೮ ಎಪ್ರೀಲ್ ೧೪ ರಿಂದ ೨೧ ವರೆಗೆ ಚಿತ್ತರಗಿ ಸಂಸ್ಥಾನ ಮಠದ ಶಾಖಾಮಠ–ವಾಗಿರುವ ಸಿದ್ಧಯ್ಯನ ಕೋಟೆ (ಚಿತ್ರದುರ್ಗ ಜಿಲ್ಲೆ)ಯ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಶಾಖಾಮಠಕ್ಕೆ ಶರಣ ಮಾದಾರ ಚೆನ್ನಯ್ಯ ಪರಂಪರೆಯ ಬೆಳಗಾವಿ ಜಿಲ್ಲೆಯ ದಲಿತ ಜನಾಂಗದ ಬಸವಭಕ್ತಿ ಸಂಪನ್ನ ಯುವಕ ಶ್ರೀ ಬಸವಲಿಂಗ–ದೇಶಿಕರನ್ನು ನಿರಂಜನ ಸಂಸ್ಕಾರವಿತ್ತು **'ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ ಬಸವಲಿಂಗ ಮಹಾಸ್ವಾಮಿಗಳು'** ಎಂಬ ನೂತನ ಹೆಸರಿನಿಂದ ಬಸವಸೇವಾದೀಕ್ಷೆಯನ್ನಿತ್ತು ನಿರಂಜನ ಪೀಠಕ್ಕೆ ಅಧಿಪತಿಯನ್ನಾಗಿಸಿದರು.

ಭಕ್ತಿ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ

ನಡೆಯೊಳಗೆ ನಡಿಯ ಪೂರೈಸುವೆ.....ಕೂಡಲಸಂಗಮದೇವಾ

ಎಂಬ ಬಸವಗುರು ವಾಣಿಯಂತೆ, ೧೯೯೪ರಲ್ಲಿ ನುಡಿದ ನುಡಿಯನ್ನು ೧೯೯೮ರಲ್ಲಿ

ನಡೆಯಲ್ಲಿ ತಂದವರು ಪೂಜ್ಯ ಮಹಾಂತ ಶಿವಯೋಗಿಗಳು. 'ಗುರುವಿನಲಿ ಕುಲವಿಲ್ಲ, ಜಂಗಮದಲ್ಲಿ ಜಾತಿ ಇಲ್ಲ' ಎಂಬ ಬಸವತತ್ವವನ್ನು ನಿಜಾಚರಣೆಗೆ ತಂದು ತೋರಿಸಿದ ಪೂಜ್ಯ ಮಹಾಂತಶಿವಯೋಗಿಗಳು ನಾಡಿನ ಮಠಾಧಿಪತಿಗಳಿಗೆಲ್ಲ ಆದರ್ಶಪ್ರಾಯರಾಗಿದ್ದಾರೆ.

**ಶ್ರೀಮೂಜಗಂ ಅವರ ಅಂತಿಮ ಕಾಲದಲ್ಲಿ ಸಾಂತ್ವನ ಹೇಳಿದ್ದು :**

ಪೂಜ್ಯಶ್ರೀ ಮಹಾಂತಪ್ಪಗಳದು ಬಸವ ಹೃದಯ, ಬೈದವರೆನ್ನ ಬಂಧುಗಳೆಂಬ, ಆಳಿಗೊಂಡವರೆನ್ನ ಆಳ್ದ[illegible], ಎಂಬ ಬಸವಗುರು ವಾಣಿಯಂತೆ [illegible]ನಾರವ ಇವನಾರವನೆಂದೆನ್ನದೇ ಇವನಮ್ಮವನೆಂದು ಅಪ್ಪಿಕೊಳ್ಳುವ ಮಾತೃಹೃದಯಿಗಳು. ೧೯೯೪ರ ದಲಿತ–ಉತ್ತರಾಧಿಕಾರಿ ಪ್ರಸಂಗದ ಹಿನ್ನೆಲೆಯಲ್ಲಿ ಯಾರ್ಯಾರದೋ ಮಾತುಗಳನ್ನು ಕೇಳಿ, ಬಸವ ವಿರೋಧಿಗಳ ತಂತ್ರಗಾರಿಕೆಗೆ ಒಳಗಾಗಿ ಮಹಾಂತಪ್ಪಗಳವರಿಗೆ ತಮ್ಮಿಂದ ತೊಂದರೆಯಾಯಿತು. ಮಹಾಂತರಿಗೆ ನೋವಾಯಿತು ಎಂದು ಶ್ರೀ ಮೂಜಗಂ ಅವರು ತಮ್ಮ ಅಂತಿಮ ಕಾಲದಲ್ಲಿ ನೊಂದುಕೊಂಡರು. ಹೀಗಾಗಬಾರದಾಗಿತ್ತು, ಹಾಗೆ ವರ್ತಿಸಬಾರದಾಗಿತ್ತು ಎಂದು ಮನದಲ್ಲಿಯೇ ಕೊರಗಿದರು. ಹುಬ್ಬಳ್ಳಿಯ ಡಾ॥ ದುಗ್ಗಾಣಿಯವರ ಶಿವಕೃಪಾ ಆಸ್ಪತ್ರೆಯಲ್ಲಿ ತುಂಬಾ ಜರ್ಜರಿತರಾಗಿ ಅನಾರೋಗ್ಯದಿಂದ ಚಿಕಿತ್ಸೆಗೊಳಗಾಗಿದ್ದಾಗ, ಮಹಾಂತಪ್ಪಗಳನ್ನು ಕಾಣುವ ಇಚ್ಛೆ ವ್ಯಕ್ತಪಡಿಸಿದರು. ಇದನ್ನು ತಿಳಿದ ಮಹಾಂತಪ್ಪಗಳು ಇಳಕಲ್ಲದ ಹತ್ತಾರು ಜನ ಭಕ್ತರೊಡಗೂಡಿ ಹುಬ್ಬಳ್ಳಿ ಆಸ್ಪತ್ರೆಗೆ ಬಂದು ಶ್ರೀ ಮೂಜಗಂ ಅವರ ಆರೋಗ್ಯ ವಿಚಾರಿಸಿ, ಅವರಿಗೆ ಸಾಂತ್ವನ ಮಾಡಿ, ಧೈರ್ಯ ಹೇಳಿದರು. ಆಗ ಶ್ರೀ ಮೂಜಗಂ "ಅವರು ಮಹಾಂತಪ್ಪಗಳೆ, ನನ್ನಿಂದಾಗಿ ತಮಗೆ ತುಂಬಾ ನೋವಾಗಿದೆ. ನೀವು ನನ್ನನ್ನು ಕ್ಷಮಿಸಬೇಕು. ನೀವು ಕ್ಷಮಿಸಿದೆ ಎಂದರೆ ಮಾತ್ರ ನಾವು ನೆಮ್ಮದಿಯಿಂದ ದೇಹತ್ಯಾಗ ಮಾಡುವೆವು" ಎಂದು ಎರಡೂ ಕೈ ಹಿಡಿದು ಕಣ್ಣೀರು ತಂದರು. ಆಗ ಇಳಕಲ್ಲ ಪೂಜ್ಯರು ಅವರಿಗೆ ಸಾಂತ್ವನ–ಸಮಾಧಾನ ಮಾಡುತ್ತಾ "ನನಗೆ ತಾವೇನೂ ಅನ್ಯಾಯ ಮಾಡಿಲ್ಲ. ಬಸವಣ್ಣನವರಿಗೆ ನಾವು ಎಲ್ಲವನ್ನೂ ಅರ್ಪಿಸಿದ್ದೇವೆ. ತಾವು ಬಸವಣ್ಣನವರಲ್ಲಿ ಆತ್ಮನಿವೇದನೆ ಮಾಡಿಕೊಳ್ಳಿರಿ. ಶರಣಾಗತ ರಕ್ಷಕ ಅಪ್ಪ ಬಸವಣ್ಣ, ಬಸವಾ ಬಸವಾ ಎನ್ನಿರಿ, ನಿಮ್ಮ ಯಾತನೆ ದೂರಾಗ್ತದೆ" ಎಂದರು. ಶ್ರೀ ಮೂಜಗಂ ಅವರು 'ಮಹಾಂತಪ್ಪಗಳೆ, ನಿಮ್ಮ ರೂಪದಲ್ಲಿಯೇ ಬಸವಣ್ಣ ಇದ್ದಾನೆ' ಎಂದು ಕಂಬನಿಮಿಡಿದರು. ಪೂಜ್ಯ ಮಹಾಂತಪ್ಪಗಳು ಆತ್ಮೀಯವಾಗಿ ಮೈದಡವಿ ಬಸವ ಬಸವಾ ಎಂದು ಮಂತ್ರ ಸ್ಮರಣೆಗೈಯುತ್ತಾ ಭಸ್ಮವನ್ನು ಧರಿಸಿ, ಬಸವಾ ಬಸವಾ ಎಂದು ಧ್ಯಾನ ಮಾಡುತ್ತಾ ನಿದ್ರಿಸಿರಿ, ಎಂದು ವಿನೀತಭಾವದಿಂದ ನುಡಿದು, ಭಕ್ತರೊಂದಿಗೆ ಇಳಕಲ್ಲಕ್ಕೆ ಮರಳಿ ಬಂದರು. ಕೆಲವೇ ದಿನಗಳಲ್ಲಿ ಶ್ರೀ ಮೂಜಗಂ ಅವರು ಬಸವಾ ಬಸವಾ ಎಂದು ಸ್ಮರಣೆಗೈಯುತ್ತಾ ದಿನಾಂಕ

೨೫-೦೬-೨೦೦೩ ರಂದು ಬಸವ ಮಹಾಬಯಲಿನಲ್ಲಿ ಬಯಲಾದರು. ಶ್ರೀ ಮೂಜಗಂ ಅವರ ಅಂತ್ಯಸಂಸ್ಕಾರಕ್ಕೆ ದಯಮಾಡಿಸಿದ್ದ ಶ್ರೀ ಮಹಾಂತಪ್ಪಗಳು ೧೯೪೩ ರಿಂದ ೨೦೦೩ ವರೆಗಿನ ಅಂದರೆ ೬೦ ವರ್ಷಗಳ ಕಾಲದ ಶ್ರೀ ಮೂಜಗಂ ಅವರ ಸ್ನೇಹದ-ವ್ಯಕ್ತಿತ್ವವನ್ನು ಸ್ಮರಿಸಿಕೊಂಡು ಶ್ರದ್ಧಾಂಜಲಿ ಸಲ್ಲಿಸಿದ್ದು ಮಹಾಂತ ಶಿವಯೋಗಿಗಳ ಅಂತಃಕರುಣ ನಿಷ್ಕಲ್ಮಶ ಪವಿತ್ರ ಭಾವ ಎದ್ದು ಕಾಣುತ್ತದೆ.

**ಲಂಬಾಣಿ ಜನಾಂಗದ ಸಿದ್ಧಲಿಂಗರಿಗೆ ಪಟ್ಟಾಭಿಷೇಕ :**

ರಾಯಚೂರ ಜಿಲ್ಲೆಯ ಲಿಂಗಸಗೂರ ಛಾವಣಿಯ ಚಿತ್ತರಗಿ ಶ್ರೀ ವಿಜಯ ಮಹಾಂತೇಶ ಸಂಸ್ಥಾನ ಶಾಖಾ ಮಠ 'ಅನುಭವ ಮಂಟಪ' ಕ್ಕೆ ಲಂಬಾಣಿ ಜನಾಂಗದ ಕಡ್ಲಿಮಟ್ಟಿಯ ಪೂಜ್ಯ ಶ್ರೀ ಸಿದ್ಧಲಿಂಗರನ್ನು ದಿನಾಂಕ: ೨, ೮, ೯ ನವೆಂಬರ್ ೨೦೦೨ರಂದು ನಿರಂಜನ ಚರಪಟ್ಟಾಧಿಕಾರ ಮಹೋತ್ಸವದ ಮೂಲಕ 'ಜಂಗಮಸ್ಥಲ' ನೀಡಿ, ನಾಮಕರಣ ಮಾಡಿ, ಇನ್ನೋರ್ವ ಸಮರ್ಥ ದಲಿತ ಜನಾಂಗದ ಸಾಧಕನು ತಮ್ಮ ಶಾಖಾ ಮಠದ ಸ್ವಾಮಿಗಳಾಗುವಂತೆ ಮಾಡಿದರು. **ಸ್ವಾಮಿತ್ವ, ಜಂಗಮತ್ವ ಎಂಬುದು ಹುಟ್ಟಿನಿಂದಲ್ಲ, ಸಾಧನೆ ಹಾಗೂ ಸಂಸ್ಕಾರದಿಂದ** ಎಂಬ ಬಸವತತ್ವ ಸಂದೇಶವನ್ನು ಪೂಜ್ಯ ಮಹಾಂತ ಶಿವಯೋಗಿಗಳು ಆಚರಣೆಗೆ ತಂದು-ತೋರಿದ್ದು ಅಪೂರ್ವ ಘಟನೆಯಾಗಿದೆ.

**ಬಡರೈತರಿಗೆ ನೂರಾರು ಎಕರೆ ಭೂಮಿ ಬಿಟ್ಟುಕೊಟ್ಟ ರೈತ ಪ್ರೇಮಿ :**

ಪೂಜ್ಯ ಮಹಾಂತ ಸ್ವಾಮಿಗಳು ಚಿತ್ತರಗಿ ಪೀಠಕ್ಕೆ ಬಂದ ಕಾಲದಲ್ಲಿ, ಟೆನನ್ಸಿ ಕಾಯ್ದೆ ಜಾರಿಗೆ ಬಂದಿತು. ಚಿತ್ತರಗಿ ಪೀಠದ ಪರಮಭಕ್ತರಾಗಿದ್ದ ಲಿಂ. ಶರಣ ಹುನಗುಂದದ ಶ್ರೀ ಶಂಕರಣ್ಣ ನಾಗರಾಳ ಅವರು ಹೇಳುತ್ತಿದ್ದ ನುಡಿಗಳು- "ಚಿತ್ತರಗಿ ಪೀಠದ ಶಾಖಾಮಠಗಳ ಒಟ್ಟು ಭೂಮಿ ೧೨೦೦ ಎಕರೆ ಮೇಲ್ಪಟ್ಟು ಇತ್ತು. ಎಲ್ಲ ಊರುಗಳಲ್ಲಿ ರೈತರು ಲಾವಣಿಗೆ ತೆಗೆದುಕೊಂಡು ಉಳುಮೆ ಮಾಡುತ್ತಿದ್ದರು. ಟೆನೆನ್ಸಿ ಕಾಯ್ದೆ ಬಂದಾಗ, ರೈತರು ಸ್ವಾರ್ಥಿಗಳಾಗದೇ ಮಠದ ಭೂಮಿ ಮಠಗಳಿಗೆ ಬಿಟ್ಟು ಕೊಡಲು ಪೂಜ್ಯರ ಹತ್ತಿರ ಬಂದಾಗ, ಪೂಜ್ಯರು ರೈತರ ಬಡತನ ಕಂಡು, ಅವರವರು ಮಾಡುತ್ತಿದ್ದ ಹೊಲಗಳನ್ನು ಅವರವರಿಗೆ ಬಿಟ್ಟುಕೊಟ್ಟು ನೀವೆಲ್ಲ ವಿಜಯಮಹಾಂತರ ಮಕ್ಕಳು, ಭಕ್ತರು, ಚೆನ್ನಾಗಿ ದುಡಿಯಿರಿ. ನಿಮ್ಮ ಉಪಜೀವನಕ್ಕೆ ಉಳಿಸಿಕೊಂಡು, ನಿಮ್ಮ ಇಚ್ಛಾನುಸಾರ ಮಠಗಳ ಪ್ರಸಾದ ದಾಸೋಹಕ್ಕೆ ಬೆಳೆದುದರಲ್ಲಿ ಸ್ವಲ್ಪ ದವಸ-ಧಾನ್ಯಗಳನ್ನು ನೀಡಿರಿ' ಎಂದು ಹೇಳಿದಾಗ, ರೈತರಿಗೆಲ್ಲಾ ಹೃದಯತುಂಬಿ ಬಂತು.

**ವಿಜಯಮಹಾಂತೇಶ ವಿದ್ಯಾವರ್ಧಕ ಸಂಘಕ್ಕೆ ಕಲ್ಲಿನ ಗುಡ್ಡಗಳನ್ನು ನೀಡಿದ್ದು :**

ಪೂಜ್ಯರು ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ಅಧಿಪತಿಗಳಾಗಿ ಬಂದ ಕಾಲಕ್ಕೆ ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘದ ಶಾಲೆ-ಕಾಲೇಜುಗಳು

ಆರ್ಥಿಕ ಸಂಕಷ್ಟ ಅನುಭವಿಸುತ್ತಿದ್ದವು. ಶಿಕ್ಷಕರು ಹಾಗೂ ಸಿಬ್ಬಂದಿ ವರ್ಗಕ್ಕೆ ಸಂಬಳ ನೀಡಲೂ ತೊಂದರೆ ಇತ್ತು. ಇದನ್ನರಿತ ಪೂಜ್ಯರು ಶ್ರೀ ರಾಮಣ್ಣ ಕರಡಿಯವರು ದಾನ ನೀಡಿದ್ದ ಬಲಕುಂದಿ ಹತ್ತಿರದ ೨೬೪ಳ ಎಕರೆ ಬಂಜರು ಕಲ್ಲುಗಡ್ಡ ಹಾಗೂ ಶ್ರೀ ಜಹಗೀರದಾರ ಬಂಧುಗಳು ದಾನ ನೀಡಿದ್ದ ೩೦೩ ಎಕರೆ ಗುಡ್ಡಗಳನ್ನು ಮಠಕ್ಕೆ ಇಟ್ಟುಕೊಳ್ಳದೇ ಶಿಕ್ಷಣ ಸಂಸ್ಥೆಗೆ ನೀಡಿದರು. ಇಂದು ಈ ಗುಡ್ಡಗಳು ಗ್ರ್ಯಾನೈಟ್ಸ್ ತುಂಬಿದ ಸಂಪತ್ತಿನ ನಿಧಿಗಳಾಗಿವೆ. ಶಿಕ್ಷಣ ಸಂಸ್ಥೆ-ಶಾಲೆ ಕಾಲೇಜುಗಳು ಭವ್ಯವಾಗಿ ಬೆಳೆಯಲು ಸಾಧ್ಯವಾಯಿತು. ಇಂತಹ ನಿಃಸ್ವಾರ್ಥ ಶಿಕ್ಷಣ ಪ್ರೇಮಿ ಪೂಜ್ಯ ಮಹಾಂತಪ್ಪಗಳು ಎಂದು ಇಳಕಲ್ಲ ಹಿರಿಯ ಭಕ್ತರು ಇಂದಿಗೂ ನೆನೆಯುತ್ತಾರೆ.

**ಶ್ರೀ ವಿಜಯ ಮಹಾಂತೇಶ ತರುಣ ಸಂಘದ ಸ್ಥಾಪನೆ :**

ಇಳಕಲ್ಲದ ಯುವಶಕ್ತಿಯು ಕ್ರಿಯಾಶೀಲ ಸದ್ಬಳಕೆಯಾಗಲೆಂದು ಪೂಜ್ಯರು 'ಶ್ರೀ ವಿಜಯ ಮಹಾಂತೇಶ ತರುಣ ಸಂಘ'ವನ್ನು ಹುಟ್ಟು ಹಾಕಿದರು. ತನ್ಮೂಲಕ ಶ್ರೀಮಠದ ಎಲ್ಲ ಪ್ರಗತಿಪರ ಕಾರ್ಯಕ್ರಮಗಳಲ್ಲಿ ಶ್ರೀಮಠದ ಯುವ ಭಕ್ತರು ಸಕ್ರೀಯವಾಗಿ ದುಡಿದು, ಎಲ್ಲ ಕೆಲಸ-ಕಾರ್ಯಗಳನ್ನು ಶ್ರಾವಣಮಾಸದ ಜಾತ್ರಾ ಮಹೋತ್ಸವಗಳನ್ನು, ಜಿಲ್ಲಾ ಮಟ್ಟದ, ರಾಜ್ಯಮಟ್ಟದ, ರಾಷ್ಟ್ರಮಟ್ಟದ ಕ್ರೀಡೆಗಳನ್ನು ಸ್ಪರ್ಧಾತ್ಮಕವಾಗಿ ಸಂಘಟಿಸಲು ಸಾಧ್ಯವಾಯಿತು.

**'ಅಕ್ಕನಬಳಗ'ಕ್ಕೆ ಪ್ರೇರಣೆ-ತಾಯಂದಿರಿಗೆ ಪ್ರೋತ್ಸಾಹ :**

ಪೂಜ್ಯರು ಶ್ರೀಮಠರು ಅಕ್ಕನ ಬಳಗದ ತಾಯಂದಿರಿಗೆ ಅನುಕೂಲ ಒದಗಿಸಿ, ಅಕ್ಕನಬಳಗದ ಚಟುವಟಿಕೆಗಳಿಗೆ ಪ್ರೇರಣೆ ನೀಡಿ, ಪ್ರೇರಕ ಶಕ್ತಿಯಾದರು. ವಚನ ಸಂಗೀತ, ಶರಣರ ಕುರಿತ ರೂಪಕಗಳನ್ನು ಮಾಡಲು ಪ್ರೋತ್ಸಾಹಿಸಿದರು. ತನ್ಮೂಲಕ ತಾಯಂದಿರಲ್ಲಿಯ ಪ್ರತಿಭಾವಿಕಾಸಕ್ಕೆ ಅವಕಾಶ ದೊರೆಯಿತು. ಅಕ್ಕನಬಳಗ ಇಂದಿಗೂ ಒಳ್ಳೆಯ ಹೆಸರು ಉಳಿಸಿಕೊಂಡು ಮುನ್ನಡೆಯುತ್ತಿದೆ. ಅಮೃತ ಮಹೋತ್ಸವ ಹಾಗೂ ರಾಜ್ಯ ಮಟ್ಟದ ಅಕ್ಕನಬಳಗಗಳ ಸಮಾವೇಶ ಕೂಡ ಜರುಗಿಸಿದರು.

**ಹುನಗುಂದ ಮಠದಲ್ಲಿ ಬೃಹತ್ ಬಸವಮಂಟಪ ನಿರ್ಮಾಣ :**

ಪೂಜ್ಯ ಮಹಾಂತ ಅಪ್ಪಗಳು ಚಿತ್ತರಗಿ ಪೀಠಕ್ಕೆ ಅಧಿಪತಿಗಳಾಗಿ ಬಂದಾಗ್ಗೆ ಹುನಗುಂದ ಮಠವು ತುಂಬಾ ಜೀರ್ಣಾವಸ್ಥೆಗೆ ತಲುಪಿತ್ತು. ಅಲ್ಲಿ ಪೂಜ್ಯ ಗುರುಬಸವಯ್ಯ ಮಠ ಮಾಸ್ತರು, ಶ್ರೀ ಸಿದ್ದಪ್ಪನವರು ಕಡಪಟ್ಟಿ, ಶ್ರೀ ನಾಗರಾಳ ಶಂಕರಣ್ಣ ಮುಂತಾದ ಶರಣರ ಸಹಯೋಗ ಶ್ರೀಮಠದ ಭಕ್ತರ ಸಹಾಯದೊಂದಿಗೆ ಪೂಜ್ಯರು ಇಡೀ ಮಠವನ್ನು ನವೀಕರಿಸಿ, ಒಂದು ಭವ್ಯವಾದ ಬಸವಮಂಟಪ ನಿರ್ಮಿಸಿದರು.

**ಪೂಜ್ಯ ಮಹಾಂತಪ್ಪಗಳ ದ್ವಾದಶ ಪೀಠಾರೋಹಣ :**

ಪೂಜ್ಯರು ಚಿತ್ತರಗಿ ಪೀಠಕ್ಕೆ ಅಧಿಪತಿಯಾಗಿ ಬಂದು ೧೨ ವರ್ಷ ತುಂಬಿದ ಬಳಿಕ ೧೯೮೪ರಲ್ಲಿ ಸಮಸ್ತ ಭಕ್ತರು, ಶ್ರೀ ಮೂಜಗಂ ಹುಬ್ಬಳ್ಳಿ, ಗದಗ ಜಗದ್ಗುರುಗಳು ಮುಂತಾದ ಪೂಜ್ಯರ ಸಾನಿಧ್ಯದಲ್ಲಿ ಅದ್ದೂರಿಯಾಗಿ ಪೂಜ್ಯರ ದ್ವಾದಶ ಪೀಠಾರೋಹಣ ಮಹೋತ್ಸವ ಆಚರಣೆ ಮಾಡಿದರು. ದಿನಾಂಕ ೨೬-೦೩-೧೯೮೪ ರಂದು ತುಲಭಾರ ಕಾರ್ಯಕ್ರಮ ನಡೆಸಲು ನಿರ್ಧರಿಸಿದರು. ಪೂಜ್ಯರು ತಾವು ತುಲಭಾರ ಮಾಡಿಸಿಕೊಳ್ಳಲು ಒಪ್ಪದೆ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಇತಿಹಾಸದಲ್ಲಿಯೇ ಒಂದು **ಅಭೂತಪೂರ್ವವಾದ ತುಲಾಭಾರ** ಮಾಡಿದರು. [೧] ಚಿತ್ತರಗಿ ಗ್ರಾಮದ ಆದರ್ಶ ರೈತ ಶ್ರೀ ಯಲ್ಲಪ್ಪ ಚಲವಾದಿ [ದಲಿತ], [೨] ಇಳಕಲ್ಲ ನಗರದ ಆದರ್ಶ ನೇಕಾರ ಶ್ರೀ ಅಂಬಣ್ಣ ತುಂಬಳದ [೩] ನಾಡಿನ ಖ್ಯಾತ ಶರಣಸಾಹಿತಿ ಡಾ.ಹೆಚ್.ತಿಪ್ಪೇರುದ್ರಸ್ವಾಮಿ ಮೈಸೂರು ಈ ಮೂವರನ್ನು ಒಂದು ರೂಪಾಯಿಯ ನಾಣ್ಯಗಳಲ್ಲಿ ತುಲಾಭಾರ ಮಾಡಿ, ಅವರವರ ತೂಕದ ಹಣವನ್ನು ಅವರುಗಳಿಗೆ ಅರ್ಪಿಸಿ ಗೌರವಿಸಿದರು.

**ತಂಗಡಗಿ ದಲಿತಕೇರಿಯ ಜನರಿಗೆ ಲಿಂಗದೀಕ್ಷೆ :**

ಕೂಡಲಸಂಗಮದ ಹತ್ತಿರ ತಂಗಡಗಿ ಗ್ರಾಮವು ಶರಣೆ ನೀಲಾಂಬಿಕೆ, ಶರಣೆ ಲಿಂಗಮ್ಮ ಹಾಗೂ ಅಪ್ಪಣ್ಣನವರು ಲಿಂಗೈಕ್ಯರಾದ ಕ್ಷೇತ್ರವಾಗಿದೆ. ಅಲ್ಲಿಯ ದಲಿತಕೇರಿಯ ಜನರು ಊರಹೊರಗಿದ್ದು ಕಷ್ಟದ ಜೀವನ ಬಾಳುತ್ತಿದ್ದರು. ಪೂಜ್ಯರ ಸಮಾಜೋದ್ಧಾರದ ಕಾರ್ಯವನ್ನು ಕೇಳಿ ತಿಳಿದ, ಕೇರಿಯ ವಿದ್ಯಾವಂತರು ಪೂಜ್ಯರನ್ನು ದಿನಾಂಕ ೧೧-೦೨-೧೯೯೦ ರಂದು ತಮ್ಮೂರಿಗೆ ಬರಮಾಡಿ-ಕೊಂಡು, ಕೇರಿಯನ್ನೆಲ್ಲ ಸ್ವಚ್ಛಗೊಳಿಸಿ, ತಳಿರು-ತೋರಣ ಕಟ್ಟಿ ಶೃಂಗರಿಸಿ, ದೀಕ್ಷಾ ಕಾರ್ಯಕ್ರಮ ಏರ್ಪಡಿಸಿ, ನೂರಾರು ಜನ ಇಷ್ಟಲಿಂಗ ಸಂಸ್ಕಾರ ಹೊಂದಿ, ಮಹಾಂತಜೋಳಿಗೆಗೆ ತಮ್ಮ ದುಶ್ಚಟಗಳನ್ನು-ಮೂಢನಂಬಿಕೆಗಳನ್ನು ನೀಡಿದರು. ಪ್ರೊ.ಸಿದ್ದಣ್ಣ ಲಂಗೋಟಿ, ಪ್ರೊ. ಪೂಜಾರ, ಶ್ರೀ ಶಂಕರಣ್ಣ ನಾಗರಾಳ ಶರಣರು ಅನುಭಾವ ನೀಡಿದರು.

**ಮರೆಗುದ್ದಿ ಮಹಾಂತಮಠದ ಪಟ್ಟಾಭಿಷೇಕ :**

ಜಮಖಂಡಿ ತಾಲೂಕಿನ ಮರೆಗುದ್ದಿಯಲ್ಲಿ ಪೂಜ್ಯ ಶ್ರೀ ರಾಜಶೇಖರ ದೇವರು ಮಹಾಂತಮಠದ ನಿರ್ಮಾಪಕರು, ಅವರು ಶ್ರೀ ಮಹಾಂತಪ್ಪಗಳವರ ಕರುಣೆಯ ಕಂದರು. ಒಲುಮೆಯ ಶಿಷ್ಯರು, ಪೂಜ್ಯ ಮಹಾಂತಪ್ಪಗಳವರಿಂದ ಚಿನ್ಮಯಾನುಗ್ರಹ ದೀಕ್ಷೆ ಪಡೆದು ರಾಜಶೇಖರದೇಶಿಕರಾಗಿದ್ದರು. ಅವರ ನಿರಂಜನ ಪಟ್ಟಾಧಿಕಾರವನ್ನು ೧೯೯೭ರಲ್ಲಿ ಏರ್ಪಡಿಸಿ, ಬೀದರ ಜಿಲ್ಲೆಯ ಪೂರ್ವಾಶ್ರಮದಲ್ಲಿ ದಲಿತ ಜನಾಂಗದ, ಬೆಲ್ದಾಳ ಶ್ರೀ ಸಿದ್ದರಾಮೇಶ್ವರ ಶರಣವನ್ನು ಕರೆಯಿಸಿ [ಶ್ರೀ

ಬೆಲ್ದಾಳ ಶರಣರು ಭಾಲ್ಕಿ ಹಿರೇಮಠದ ಚೆನ್ನಬಸವ ಪಟ್ಟದ್ದೇವರಿಂದ ಜಂಗಮದೀಕ್ಷೆ ಪಡೆದವರು]. ಆ ಶರಣರಿಂದಲೇ ರಾಜಶೇಖರ ದೇಶಿಕರಿಗೆ 'ಜಂಗಮಸ್ಥಲ' ನೀಡಿ ಪಟ್ಟಾಧಿಕಾರ ಸಮಾರಂಭ ಅದ್ದೂರಿಯಾಗಿ ನೆರವೇರಿಸಿ, ಶ್ರೀ ಮನಿಪ್ರ ಗುರುಮಹಾಂತ ಸ್ವಾಮಿಗಳೆಂದು ನಾಮಕರಣ ಮಾಡಿ 'ಜಂಗಮಕ್ಕೆ ಜಾತಿ ಇಲ್ಲ, ಜಂಗಮ ಎಂಬುದು ಜ್ಯೋತಿಯ ತತ್ವ ಎಂಬುದನ್ನು ಪೂಜ್ಯ ಮಹಾಂತರು ಸಾಧಿಸಿ ತೋರಿದರು.

**ಶಿರೂರು ಶ್ರೀ ವಿಜಯಮಹಾಂತ ತೀರ್ಥದಲ್ಲಿ ಯೋಗ-ನಿಸರ್ಗ ಚಿಕಿತ್ಸಾ ಕೇಂದ್ರ :**

ಮಹಾತಪಸ್ವಿ ಶ್ರೀ ವಿಜಯಮಹಾಂತ ಶಿವಯೋಗಿಗಳು ಶಿರೂರ [ತಾ॥ ಬಾಗಲಕೋಟ] ಗುಡ್ಡದಲ್ಲಿ ಅಲ್ಲಿ ಕಲ್ಲು ಒಡೆಯುತ್ತಿದ್ದ ವಡ್ಡರು ಹಾಗೂ ಕೃಷಿ ಕೂಲಿಕಾರ್ಮಿಕರು ನೀರಿನ ದಾಹದಿಂದ ಬಳಲುತ್ತಿದ್ದ ಸಂದರ್ಭದಲ್ಲಿ, ಜಂಗಮ ಸಂಚಾರ ಕೈಕೊಂಡು ಅಲ್ಲಿಗೆ ದಯಮಾಡಿಸಿದಾಗ, ಅವರ ಪ್ರಾರ್ಥನೆಯಂತೆ ಒಂದು ಸ್ಥಾನದಲ್ಲಿ ಪಾದವಿಟ್ಟು, ಇಲ್ಲಿ ಅಗಿಯಿರಿ, ನೀರಿದೆ ಎಂದು ಪ್ರಸಾದವಾಣಿ-ಯಿಂದ ನುಡಿದರು. ಅಲ್ಲಿ ನೆಲ ಕೆದರಿದಾಗ ಜೀವಜಲ ಪುಟಿದೆದ್ದಿತು. 'ನೀನೊಲಿದು ಪಾದವನಿಟ್ಟ ನೆಲವೇ ಸುಕ್ಷೇತ್ರ, ಜಲವೇ ಪಾವನ ತೀರ್ಥ' ಎಂಬ ಶರಣವಾಣಿಯಂತೆ ಅದು ಶ್ರೀ ವಿಜಯಮಹಾಂತೇಶ ತೀರ್ಥವೆಂದೇ ನೂರಾರು ವರುಷಗಳಿಂದ ಪ್ರಸಿದ್ಧಿ ಪಡೆದಿದೆ. ಎಂಥ ಬರಗಾದಲ್ಲಿಯೂ ಅಲ್ಲಿಯ ನೀರು ಬತ್ತುವುದಿಲ್ಲ.

ಈ ಸ್ಥಳದಲ್ಲಿ ಪೂಜ್ಯ ಮಹಾಂತ ಶಿವಯೋಗಿಗಳು ದಿನಾಂಕ ೨೭-೧೧-೧೯೯೯ ರಂದು ಯೋಗ ಹಾಗೂ ನಿಸರ್ಗಚಿಕಿತ್ಸಾಕೇಂದ್ರ ಸ್ಥಾಪಿಸಿ, ಕುಟೀರಗಳನ್ನು ನಿರ್ಮಿಸಿ ಉದ್ಘಾಟಿಸಿದ್ದಾರೆ. ಈ ಸಮಾರಂಭಕ್ಕೆ ಡಾ.ಎ.ವಿ.ಗದಗ, ಡಾ. ನಾಗಲೋಟಿಮಠ, ಪ್ರೊ.ಸಿದ್ದಣ್ಣ ಲಂಗೋಟಿ ಅತಿಥಿಗಳಾಗಿ ಆಗಮಿಸಿದ್ದರು. ಅಥಣಿ ತಾಲೂಕಿನ ಸತ್ತಿ ಗ್ರಾಮದ ಪಾಟೀಲರ ಮನೆತನದ ಪೂಜ್ಯ ಡಾ.ಬಸವಲಿಂಗ ಸ್ವಾಮಿಗಳು ನಿಸರ್ಗಚಿಕಿತ್ಸಾ ಹಾಗೂ ಯೋಗ ಕೇಂದ್ರ ನಡೆಸಿಕೊಂಡು ಉಪಚಾರ ಸೇವೆ ಕೈಕೊಂಡಿದ್ದಾರೆ.

**ಬಸವಕಲ್ಯಾಣ ಅನುಭವ ಮಂಟಪದ ವಿಶ್ವ ಬಸವಧರ್ಮ ಟ್ರಸ್ಟಿನ ಅಧ್ಯಕ್ಷತೆ :**

ಲಿಂಗಾಯತ ಧರ್ಮಕೇಂದ್ರ ಅನುಭವ ಮಂಟಪ ಬಸವಕಲ್ಯಾಣದ ವಿಶ್ವ ಬಸವಧರ್ಮ ಟ್ರಸ್ಟಿನ ವ್ಯವಸ್ಥೆಯು ಪೂಜ್ಯ ಶ್ರೀ ಭಾಲ್ಕಿಯ ಚೆನ್ನಬಸವ ಪಟ್ಟದ್ದೇವರು ಹಾಗೂ ಡಾ. ಬಿ. ಡಿ. ಪಟೇಲರು ಲಿಂಗೈಕ್ಯರಾದ ನಂತರ, ಟ್ರಸ್ಟಿನ ಗೌರವಾಧ್ಯಕ್ಷತೆ, ಅಧ್ಯಕ್ಷತೆ, ಆಡಳಿತಾಧಿಕಾರಿ ಸ್ಥಾನಗಳಿಗಾಗಿ ಪೈಪೋಟಿ ನಡೆದು, ಭಕ್ತರಲ್ಲಿ ಭಿನ್ನಾಭಿಪ್ರಾಯಗಳುಂಟಾಗಿ ವಾತಾವರಣವೆಲ್ಲ ಕಲುಷಿತಗೊಂಡಿತ್ತು. ಪೋಲಿಸ ರಕ್ಷಣೆಯಲ್ಲಿ ಟ್ರಸ್ಟಿನ ಸಭೆ ಕರೆಯಲಾಯಿತು. ಕೊನೆಗೆ ಸಮಸ್ಯೆಗಳನ್ನು ಬಗೆಹರಿಸಿ, ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಕೆಲ ಕಾಲ ಅಧ್ಯಕ್ಷರಾದರು.

ಅನಂತರ ೨೦೦೩ನೆಯ ಇಸ್ವಿಯಲ್ಲಿ ಎಪ್ರೀಲ್ ೨೩ರಂದು ಪೂಜ್ಯ ಮಹಾಂತ ಶಿವಯೋಗಿಗಳು ಇಳಕಲ್ಲ ಅವರನ್ನು ಅಧ್ಯಕ್ಷರನ್ನಾಗಿ, ಶರಣೆ ಸುಶೀಲಾದೇವಿ ಬಿ.ವ್ಹಿ.ಪಟೇಲ ತಾಯಿವರನ್ನು ಕಾರ್ಯಾಧ್ಯಕ್ಷರನ್ನಾಗಿ ಒಪ್ಪಿಸಿದರು. ೨೦೧೫ ರಿಂದ ಭಾಲ್ಕಿಯ ಶ್ರೀ ಬಸವಲಿಂಗ ಪಟ್ಟದೇವರು ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ದಿಲ್ಲಿಯ ಜಾಟವ ಜನಾಂಗದವರಿಗೆ ಲಿಂಗದೀಕ್ಷೆ :**

ಭಾರತದ ರಾಜಧಾನಿ ದಿಲ್ಲಿಯಲ್ಲಿ ೧೬ ಲಕ್ಷಕ್ಕಿಂತ ಹೆಚ್ಚು ಜಾಟವ ಜನಾಂಗದವರಿದ್ದು, ಅವರೆಲ್ಲ ಉತ್ತರ ಭಾರತದ ದಲಿತ [ಪರಿಶಿಷ್ಟ ಜಾತಿ] ಜನಾಂಗದವರಿದ್ದಾರೆ. ಜಾತೀಯತೆ, ಅಸ್ಪೃಶ್ಯತೆ, ವರ್ಣಾಶ್ರಮಧರ್ಮದ ವಿರುದ್ಧ ಹೋರಾಡುತ್ತಿರುವ ಅವರಿಗೆ ಗದಗಿನ ಜಗದ್ಗುರು ತೋಂಟದ ಸಿದ್ದಲಿಂಗ ಸ್ವಾಮಿಗಳು ಕೋಮುಸೌಹಾರ್ಧತಾ ಪ್ರಶಸ್ತಿ' ಸ್ವೀಕರಿಸಲು ದಿಲ್ಲಿಗೆ ಹೋದಾಗ್ಗೆ ಸಂಪರ್ಕ ಕಲ್ಪಿಸಿದವರು ಶ್ರೀ ಮಲ್ಲಿಕಾರ್ಜುನ ಪಾಟೀಲ ವಕೀಲರು. ಇದರ ಪರಿಣಾಮವಾಗಿ ದಿಲ್ಲಿಯಿಂದ ೨೮ ಜನ ಜಾಟವ ಜನಾಂಗದ ಮುಖಂಡರು, ವಿದ್ಯಾವಂತರು ಗದಗಿಗೆ ಬಂದು, ಜಗದ್ಗುರುಗಳ ಮಾರ್ಗದರ್ಶನದಂತೆ ದಿನಾಂಕ: ೧೮-೦೬-೨೦೦೩ ರಂದು ಇಳಕಲ್ಲಕ್ಕೆ ಬಂದರು. ದಿನಾಂಕ:೧೯-೦೭-೨೦೦೩ರಂದು ಬೆಳಿಗ್ಗೆ ೨೮ ಜನರು ಪೂಜ್ಯ ಮಹಾಂತ ಶಿವಯೋಗಿಗಳಿಂದ ಇಷ್ಟಲಿಂಗ ದೀಕ್ಷೆ ಹೊಂದಿದರು. ಆ ಸಂದರ್ಭದಲ್ಲಿ ಪ್ರೊ ಸಿದ್ಧಣ್ಣ ಲಂಗೋಟಿ ಅವರು ಅವರೆಲ್ಲರಿಗೂ ಹಿಂದಿಯಲ್ಲಿ ಇಷ್ಟಲಿಂಗದ ತತ್ವಜ್ಞಾನ, ಶೋಷಣಾರಹಿತ, ಪೂಜಾರಿ-ಪುರೋಹಿತಶಾಹಿ ರಹಿತ, ಸಮಾಜೋ-ಧಾರ್ಮಿಕ ಸಮಾನತೆಯ ಅರಿವಿನ ಕುರುಹಾದ 'ಇಷ್ಟಲಿಂಗ' ಕುರಿತು ವೈಜ್ಞಾನಿಕವಾಗಿ, ವೈಚಾರಿಕವಾಗಿ, ಅನುಭಾವಾತ್ಮಕವಾಗಿ ವಚನಗಳ ಉದಾಹರಣೆಗಳೊಂದಿಗೆ ವಿವರಿಸಿದರು.

ಅದೇ ಪ್ರಕಾರ ಮುಂದೆ ಕೆಲವೇ ದಿನಗಳಲ್ಲಿ ದಿಲ್ಲಿಯಲ್ಲಿ ಬೃಹತ್ ಪ್ರಮಾಣದ ಜಾಟವ ಸಮ್ಮೇಳನ ಮಾಡಿ ೩೦೦೦ [ಮೂರು ಸಾವಿರ] ಮೇಲ್ಪಟ್ಟು ಜನರು ಸಾಮೂಹಿಕವಾಗಿ ಇಳಕಲ್ಲ ಪೂಜ್ಯರ, ಭಾಲ್ಕಿ ಪೂಜ್ಯರ ನೇತೃತ್ವದಲ್ಲಿ ಗದಗ ಜಗದ್ಗುರುಗಳ ಸಾನಿಧ್ಯದಲ್ಲಿ ದೀಕ್ಷೆ ಹೊಂದಿ ಅವರೆಲ್ಲ ಬಸವ ಧರ್ಮಿಯರಾದರು.

**ಇಳಕಲ್ಲದಲ್ಲಿ ಅಶ್ವಾರೂಢ ಬಸವೇಶ್ವರ ಭವ್ಯ ಪುತ್ಥಳಿ ಅನಾವರಣ :**

ಇಳಕಲ್ಲ ಪ್ರವೇಶದ-ರಾಷ್ಟ್ರೀಯ ಹೆದ್ದಾರಿ ಪ್ರಮುಖ ಸ್ಥಾನದಲ್ಲಿ ದಿನಾಂಕ ೧೩-೨-೨೦೦೪ ರಂದು ಅಶ್ವಾರೂಢ ಬಸವೇಶ್ವರರ ಭವ್ಯ ಪುತ್ಥಳಿಯನ್ನು ಅನಾವರಣಗೊಳಿಸಲಾಯಿತು. ಪೂಜ್ಯ ಶ್ರೀ ಗದಗ ಜಗದ್ಗುರುಗಳ ಹಾಗೂ ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳ ಲಿಂಗಹಸ್ತದಿಂದ ಅನಾವಣವಾಯಿತು. ಈ ಭವ್ಯವಾದ ಮೂರ್ತಿಗೆ ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘದಿಂದ

೧೫ ಲಕ್ಷ ರೂಪಾಯಿಗಳನ್ನು ಪೂಜ್ಯರು ಕೊಡಿಸಿದ್ದರು. ಉಳಿದ ಹತ್ತಾರು ಲಕ್ಷ ರೂಪಾಯಿಗಳನ್ನು ಇಳಕಲ್ಲ ಪುರಸಭೆವರು. ಶ್ರೀ ವೆಂಕಟೇಶ ಸಾಕ ಪುರಸಭೆಯ ಅಧ್ಯಕ್ಷರು ಹಾಗೂ ಸದಸ್ಯರು, ವಿ.ಮ. ಸಂಘದ ಚೇರಮನ್‌ರಾದ ಶ್ರೀ ಬಸವಲಿಂಗಪ್ಪ ನವರು ವಾಲಿ, ಸ್ಥಳ ದಾನಿಗಳಾದ ಶ್ರೀ ಮಹೇಶ್ವಪ್ಪ ಸಜ್ಜನ, ಇವರನ್ನು ಪೂಜ್ಯರು ಸತ್ಕಾರ ಮಾಡಿದರು.

**ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ನೂತನ ಉತ್ತರಾಧಿಕಾರಿ ಪ್ರಸಂಗದ ಘಟನೆಗಳು :**

ಪರಮಪೂಜ್ಯ ಮಹಾಂತ ಶಿವಯೋಗಿಗಳು ಚಿತ್ತರಗಿ ಪೀಠದ ೧೯ ನೆಯ ಮಠಾಧಿಪತಿಯಾಗಿ ೧೯೭೦ ಮೇ ೧೭ ರಂದು ಅಧಿಕಾರ ವಹಿಸಿಕೊಂಡು ೨೩ ವರ್ಷ ಗತಿಸಿದ ನಂತರ ಅಂದರೆ ಪೂಜ್ಯರು ೭೨ನೆಯ ವರ್ಷ ದಾಟಿದ ಬಳಿಕ ಅನೇಕ ಹಿರಿಯ ಭಕ್ತರು, ಜಗದ್ಗುರುಗಳು ಆಗಾಗ ಪೂಜ್ಯರೊಂದಿಗೆ ಉತ್ತರಾಧಿಕಾರಿ ವಿಚಾರ ಪ್ರಸ್ತಾಪಿಸುತ್ತಿದ್ದರು. ಪೂಜ್ಯರು ಮಾತ್ರ ಮೌನವಾಗಿಯೇ ಇರುತ್ತಿದ್ದರು. ಕೆಲವು ಮಠಾಧೀಶರು ಪೂಜ್ಯ ಮಹಾಂತಪ್ಪಗಳವರ ಹುಟ್ಟೂರಿನ ಅಂದರೆ ಹಿಪ್ಪರಿಗೆಯ ವಿದ್ಯಾವಂತ ಸುಸಂಸ್ಕೃತ ವ್ಯಕ್ತಿಯ ಹೆಸರನ್ನೂ ಸೂಚಿಸಿದರು. ಆದರೆ ಪೂಜ್ಯರು ವಿರಕ್ತ ಮಠಗಳಿಗೆ ಪೂರ್ವಾಶ್ರಮದ ರಕ್ತಸಂಬಂಧಿಗಳನ್ನು ಉತ್ತರಾಧಿಕಾರಿಯಾಗಿ ಮಾಡಿಕೊಳ್ಳುವುದು ಯೋಗ್ಯವಲ್ಲ. **ರಕ್ತಸಂಬಂಧಕ್ಕಿಂತ ಭಕ್ತಿ ಸಂಬಂಧ ಶ್ರೇಷ್ಠ** ಎಂದು ಸೌಜನ್ಯದಿಂದಲೇ ಅವರ ವಿಚಾರವನ್ನು ದೂರ ಸರಿಸಿದರು.

ಅಪ್ಪ ಬಸವಣ್ಣನವರ ಕರುಣೆ ಹಾಗೂ ಶ್ರೀ ವಿಜಯಮಹಾಂತ ಶಿವಯೋಗಿಗಳ ಕೃಪೆಯಿಂದಾಗಿ ಪೂಜ್ಯರ ಗಮನಕ್ಕೆ ಒಬ್ಬ ಯೋಗ್ಯ ವ್ಯಕ್ತಿ ಕಂಡರು. ಅವರನ್ನು ಹತ್ತಾರು ವರುಷಗಳಿಂದ ಪೂಜ್ಯರು ನೋಡುತ್ತಲೇ ಇದ್ದರು. ಅವರು ಸಾತ್ವಿಕ ಸ್ವಭಾವ, ಸದವಿನಯದ ನಡತೆ, ಶುದ್ಧ ಚಾರಿತ್ರ್ಯ, ಉನ್ನತ ವಿದ್ಯೆ ಪಡೆದಿದ್ದರೂ ವಿದ್ಯಾಮದವಿಲ್ಲದ ನಿರಹಂಕಾರಿ, ಸತ್ಯಶುದ್ಧ ಕಾಯಕ, ದಾಸೋಹಂಭಾವಿಯ ಆಚರಣೆ ಕಂಡಿದ್ದರು. ಧಾರವಾಡ ಮುರುಘಾಮಠದಲ್ಲಿ, ಹಾವೇರಿ ಹೊಸಮಠದಲ್ಲಿ, ಚಿತ್ರದುರ್ಗ ಬೃಹನ್ಮಠದಲ್ಲಿ ಅವರ ಕ್ರಿಯಾಶೀಲ ವ್ಯಕ್ತಿತ್ವ ಗಮನಿಸಿದ್ದರು. ಕ್ರಿ.ಶ. ೨೦೦೨ನೆಯ ಇಸ್ವಿಯ ಕಾಲಕ್ಕೆ ಅವರು ಮೈಸೂರಿನ ಮಹಾಲಿಂಗೇಶ್ವರ ಮಠದಲ್ಲಿದ್ದು ಬಸವತತ್ವ ಪ್ರಸಾರದ ಚರಜಂಗಮವಾಗಿ ಕಾರ್ಯನಿರ್ವಹಿಸುತ್ತಿದ್ದರು. ಅವರ ಆಗಿನ ಹೆಸರು ಸಿದ್ಧರಾಮಸ್ವಾಮಿಗಳು. ಪೂಜ್ಯರಿಗೆ ಆ ವ್ಯಕ್ತಿಯ ಬಗ್ಗೆ ವಿಚಾರ ಹೊಳೆಯಿತು. ಆಗಲೇ ಆ ಸ್ವಾಮಿಗಳಿಗೆ ೪೨ ವರ್ಷವಾಗಿತ್ತು. ಒಬ್ಬಿಬ್ಬ ಶರಣರು, ಭಕ್ತರ ಮೂಲಕ 'ಅವರಿಗೆ ಯಾವುದಾದರೂ ಮಠಕ್ಕೆ ಸ್ವಾಮಿಗಳಾಗಲು ಇಚ್ಛೆ ಇದೆಯೋ ಇಲ್ಲವೋ ಕೇಳಿ, ತಿಳಿದು ಹೇಳಿರಿ' ಎಂದೂ ಸೂಚಿಸಿದ್ದರಂತೆ.

ಭಕ್ತರು ಶ್ರೀ ಸಿದ್ದರಾಮಸ್ವಾಮಿಗಳನ್ನು ಸಂಪರ್ಕಿಸಿ ಕೇಳಿದಾಗ-"ನನಗೆ ಯಾವ ಮಠಕ್ಕೂ ಅಧಿಕಾರಿಯಾಗಲೂ ಇಚ್ಛೆಯಿಲ್ಲ. ಚರಜಂಗಮವಾಗಿಯೇ

ದೇಶ-ವಿದೇಶಗಳನ್ನು ಸಂಚರಿಸುತ್ತಾ ಬಸವಗುರುವಿನ ತತ್ವ ಪ್ರಸಾರ ಮಾಡುವ ಧ್ಯೇಯವಿದೆ" ಎಂದು ದೃಢವಾಗಿ ಉತ್ತರಿಸಿದ್ದರಂತೆ! ಈ ವಿಚಾರ ಕೇಳಿ-ತಿಳಿದಾಗ ಪೂಜ್ಯ ಮಹಾಂತಪ್ಪಗಳು ಭಕ್ತರೊಂದಿಗೆ ಚಿಂತನಗೈದು "ಮಠಾಧಿಕಾರ ಬೇಡ, ಒಲ್ಲೆ ಎನ್ನುವ ಸಾಧಕರು ಮಾತ್ರ ನಿಜವಾದ ವಿರಕ್ತರಾಗಬಲ್ಲರು" ಎಂದು ನಿರ್ಧರಿಸಿ, ಅವರಲ್ಲಿಗೆ ಅವರ ಪರಿಚಯದ ನಾಲ್ಕಾರು ಭಕ್ತರನ್ನು ಕಳಿಸಿ, ಚಿತ್ರದುರ್ಗದ ಶಿವಮೂರ್ತಿ ಜಗದ್ಗುರುಗಳ ಮೂಲಕ ಒಪ್ಪಿಸಿದರಂತೆ. ಪೂಜ್ಯರಾದ ಹಿರಿಯರ ಆದೇಶವನ್ನು ತಿರಸ್ಕರಿಸಿದರೆ ತಪ್ಪಾದೀತೆಂದು ಭಾವಿಸಿ ಅವರು ಒಪ್ಪಿಕೊಂಡರು.

ಪೂಜ್ಯ ಮಹಾಂತ ಶಿವಯೋಗಿಗಳು ಭಕ್ತರೊಡಗೂಡಿ ಚರ್ಚಿಸಿ, ಗದಗ, ಬೆಳಗಾವಿ, ನಿಡಸೋಸಿ, ಬಾಗಲಕೋಟೆ, ಕೆ.ಆರ್.ಪೇಟೆ, ಹುಲಸೂರು, ಲಿಂಗಸೂರು, ಭಾಲ್ಕಿ, ಸಿದ್ದಯ್ಯನಕೋಟೆ, ನಾಗಣಸೂರು, ಶಿರೂರ, ಅಥಣಿ, ಬೆಂಗಳೂರು, ಮೈಸೂರು ಮುಂತಾದ ಜಗದ್ಗುರುಗಳು-ಸ್ವಾಮಿಗಳಿಗೆ ಈ ವಿಚಾರ ತಿಳಿಸಿ, ಅವರೆಲ್ಲರ ಸದಿಚ್ಛೆಯಂತೆ ದಿನಾಂಕ: ೧೬-೧೨-೨೦೦೩ ರಂದು ಬೆಳಿಗ್ಗೆ ೧೦ ಗಂಟೆಗೆ ಇಳಕಲ್ಲ ಶ್ರೀ ಮಠದಲ್ಲಿ 'ನೂತನ ಉತ್ತರಾಧಿಕಾರಿಗಳ ಹಾರ್ದಿಕ ಸ್ವಾಗತ ಸಮಾರಂಭ' ಜರುಗಿಸಿದರು. ಚಿತ್ತರಗಿ ಪೀಠದ ಸಮಗ್ರ ಬಸವ ಭಕ್ತರೆಲ್ಲ ಸಂತಸಪಟ್ಟರು. ಇಳಕಲ್ಲದಲ್ಲಿ ಹಬ್ಬದ ಸಡಗರ ಉಂಟಾಯಿತು.

ನರಗುಂದದ **ಲಿಂಗಾಯತ ಭಕ್ತ ಮನೆತನದ** ಶ್ರೀ ಸಿದ್ಧರಾಮಸ್ವಾಮಿಗಳನ್ನು ಚಿತ್ತರಗಿ ಪೀಠದ ೨೦ನೆಯ ಉತ್ತರಾಧಿಕಾರಿಯಾಗಿ ಆಯ್ಕೆ ಮಾಡಿಕೊಂಡ ವಿಚಾರವನ್ನು ಕೆಲವರು ಏನೇನೋ ಕಾರಣಗಳನ್ನು ಮುಂದೆ ಮಾಡಿ, ವಿರೋಧ ವ್ಯಕ್ತ ಮಾಡತೊಡಗಿದರು. ಪರ-ವಿರೋಧ ಅಭಿಪ್ರಾಯಗಳು ತೀಕ್ಷ್ಣವಾಗತೊಡಗಿದ್ದ-ರಿಂದ, ದಿನಾಂಕ: ೨೬-೦೮-೨೦೦೪ರಂದು ಇಳಕಲ್ಲದಲ್ಲಿ ಜನಜಾಗೃತಿವುಂಟು ಮಾಡಿ, ಜನರಲ್ಲಿಯ ಗೊಂದಲ ನಿವಾರಣೆ ಮಾಡಲೋಸುಗ ಪೂಜ್ಯ ಶ್ರೀ ಜಗದ್ಗುರು ತೋಂಟದ ಸಿದ್ದಲಿಂಗ ಸ್ವಾಮಿಗಳು ಗದಗ, ಪೂಜ್ಯ ಶ್ರೀ ಜಗದ್ಗುರು ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮಿಗಳು ಚಿತ್ರದುರ್ಗ, ಪೂಜ್ಯಶ್ರೀ ಗುರುಸಿದ್ದ ರಾಜಯೋಗೀಂದ್ರ ಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ, ಪೂಜ್ಯಶ್ರೀ ಸಿದ್ದರಾಮೇಶ್ವರ ಸ್ವಾಮಿಗಳು ನಾಗನೂರ-ಬೆಳಗಾವಿ ಹಾಗೂ ಬಾಗಲಕೋಟೆ, ದಾವಣಗೆರೆ, ಶಿರೂರ, ಲಿಂಗಸಗೂರ, ಕೆ.ಆರ್.ಪೇಟೆ, ರಬಕವಿ, ಮರೆಗುದ್ದಿ, ಪಿ.ಎಂ.ಬುದ್ನಿ, ಧಾರವಾಡ, ಮನಸೂರು, ಮುಂತಾದ ಶ್ರೀಗಳು, ಇಳಕಲ್ಲ ನಗರದ ಎಲ್ಲ ಸಂಘ-ಸಂಸ್ಥೆಗಳ ಜನರು, ಬೃಹತ್ ಪಾದಯಾತ್ರೆ ಮಾಡಿ, ಜನಜಾಗೃತಿ ಸಮಾವೇಶ ಮಾಡಿ ದಿನಾಂಕ : ೧೨-೦೯-೨೦೦೪ರಂದು ನಡೆಯಲಿರುವ ಪಟ್ಟಾಧಿಕಾರ ಸಮಾರಂಭಕ್ಕೆ ಸಹಕರಿಸಬೇಕೆಂದು ತಿಳಿವಳಿಕೆ ನೀಡಿ ಅನುಭಾವ ಮಾಡಿದರು.

ದಿನಾಂಕ : ೩೦-೦೮-೨೦೦೪ ರಂದು ಇಳಕಲ್ಲದ ಕಂಠಿ ಸರ್ಕಲ್

ನಲ್ಲಿರುವ ಶ್ರೀ ವಿಜಯಮಹಾಂತೇಶ ಅನುಭವ ಮುಂಟಪದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಹಾಗಗೂ ವಿಜಯಮಹಾಂತೇಶ ವಿದ್ಯಾವರ್ಧಕ ಸಂಸ್ಥೆಯು ಸಂಯುಕ್ತವಾಗಿ ಆಯೋಜಿಸಿದ್ದ "ಐತಿಹಾಸಿಕ ಪರಂಪರೆ ಉಳಿಸಿ" ಎಂಬ ಸಪ್ತಾಹದ ಸಮಾರಂಭ ನಡೆದಿತ್ತು. ಅಲ್ಲಿ ಪೂಜ್ಯ ಮಹಾಂತ ಅಪ್ಪಗಳು ಹಾಗೂ ಉತ್ತರಾಧಿಕಾರಿ ಶ್ರೀ ಸಿದ್ದರಾಮ ಸ್ವಾಮಿಗಳು ಸಾನಿಧ್ಯವಹಿಸಿದ್ದರು. ಆ ಸಮಾರಂಭದಲ್ಲಿ ಒಮ್ಮೆಂದೊಮ್ಮೆಲೆ ನುಗ್ಗಿ ಬಂದ ಉದ್ರಿಕ್ತ ಜನರ ಗುಂಪು ದೊಣ್ಣೆ, ಕಲ್ಲುಗಳಿಂದ ಪೂಜ್ಯರ ಮೇಲೆ ದಾಳಿಮಾಡಿತು. ಇಡೀ ಸಭಾಭವನ ರಣರಂಗವಾಯಿತು. ಉತ್ತರಾಧಿಕಾರಿ ನೇಮಕ ವಿರೋಧಿಸ[illegible]ಾರಿಗಳಲ್ಲಿ ಬಂದ ಜನರು ಹಿಂಸೆಗೆ [illegible]ದಾಗ ಪೂಜ್ಯರು ಗಾಯಗೊಂಡರು. ಪಿಎಸ್ಐ ಸೇರಿ ಹಲವಾರು ಪೋಲಿಸರೂ ಗಾಯಗೊ[illegible]ರು. ನಡೆಯಬಾರದಾದ ದುರ್ಘಟನೆಯು ನಡೆದು ಹೋಯಿತು. ೧೮೦ [illegible]ವನ್ನು ಬಂಧಿಸಿ ಪೋಲೀಸರು ಬಳ್ಳಾರಿ ಜೈಲಿಗೆ ಒಯ್ದರು. ನಿಷೇಧಾಜ್ಞೆ ಜಾರಿಯಾಯಿತು.

ಪೂಜ್ಯರು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ಬಂದರು. ಪೂಜ್ಯರ ಮೇಲಿನ ಹಲ್ಲೆಯನ್ನು ನಾಡಿನೆಲ್ಲೆಡೆ ಸಂಘ-ಸಂಸ್ಥೆಗಳು, ಮಠ-ಪೀಠಗಳವರು, ದೇಶ-ವಿದೇಶಗಳ ಪ್ರಜ್ಞಾವಂತರು ಖಂಡಿಸಿದರು. ಶಾಂತವಾಗಿ ಕುಳಿತು-ಚರ್ಚಿಸಿ ಪರಿಹಾರ ಕಂಡುಕೊಳ್ಳಬೇಕಾದದ್ದು ಹಿಂಸೆಗೆ ತಿರುಗಿ ಭಕ್ತರ ಮನಸ್ಸುಗಳು ಕ್ಷೋಭೆಗೊಂಡವು. ಪೂಜ್ಯರು ದೈಹಿಕವಾಗಿ-ಮಾನಸಿಕವಾಗಿ ಜರ್ಜಿತರಾದರು. ಆದಾಗ್ಯೂ ಮಾತೃ ಹೃದಯದ ಮಹಾಂತಪ್ಪಗಳು ತಮ್ಮನ್ನು ವಿರೋಧಿಸಿದವರೂ, 'ಹೊಯ್ದವರೆನ್ನ ಬಂಧುಗಳೆಂಬೆ ಎಂಬಂತೆ' ಅವರೂ ನಮ್ಮವರು, ನಮ್ಮ ಭಕ್ತರೇ ಇದ್ದಾರೆಂದು ಬಳ್ಳಾರಿ ಜೈಲಿಗೆ ಹೋಗಿ [೦೮-೦೯-೨೦೦೪ರಂದು] ಬಂಧಿತರಾದ ಭಕ್ತರಿಗೆ ಸಾಂತ್ವನ ಹೇಳಿದರು. ೧೮೩ ಜನ ಬಂಧಿಗಳಾಗಿದ್ದ ಭಕ್ತರ ಪರವಾಗಿ ಮಾತನಾಡಿದ ಬಸಯ್ಯ ಹಿರೇಮಠ ಅವರು 'ಸ್ವಾಮಿಗಳು ತಮ್ಮನ್ನು ಕಾಣಲು ಬಂದಿರುವುದು ತಮಗೆ ಸಂತಸ ತಂದಿದೆ......ಉತ್ತರಾಧಿಕಾರಿಗಳ ಪಟ್ಟಾಧಿಕಾರ ಸಮಾರಂಭಕ್ಕೆ ನಾವು ಅಡ್ಡಿಪಡಿಸುವುದಿಲ್ಲ' ಎಂದು ಹೇಳಿದರು [ಪ್ರಜಾವಾಣಿ ವರದಿ ೦೯-೦೯-೨೦೦೪].

ಈ ದುರ್ಘಟನೆಯಿಂದಾಗಿ ಸಾತ್ವಿಕ ಭಕ್ತರು ಮನನೊಂದರು. ಇದಕ್ಕೆ ಪೂಜ್ಯ ಮಹಾಂತಪ್ಪಗಳ ಮಾತೃಹೃದಯ ಮಮತೆಯ ಮಲಾಮು ಮಾತ್ರ ಗಾಯವನ್ನು ಮಾಯಿಸುವ ಔಷಧಿಯಾಯಿತು.

**ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಪಟ್ಟಾಧಿಕಾರ ಮಹೋತ್ಸವ :**

ಚಿತ್ತರಗಿ ಪೀಠ ಪರಂಪರೆಯು ೧೨ನೆಯ ಶತಮಾನದ ಬಸವಗುರು ಪ್ರಣೀತ ಲಿಂಗವಂತಧರ್ಮದ ಕೇಂದ್ರ ಅನುಭವ ಮಂಟಪದ ಶೂನ್ಯಪೀಠ

ಪರಂಪರೆಯ ಅಲ್ಲಮಪ್ರಭುಗಳಿಂದ ಮೊದಲ್ಗೊಂಡು, ಯಡೆಯೂರು ತೋಂಟದ ಸಿದ್ದಲಿಂಗ ಶಿವಯೋಗಿಗಳ ಶಿಷ್ಯ-ಪ್ರಶಿಷ್ಯರ ಬಳಿವಿಡಿದು ಸಾಗಿಬಂದ ಶರಣ ಪರಂಪರೆಯುಳ್ಳದ್ದಾಗಿದೆ. ಈ ಪರಂಪರೆಯ ೧೬ನೆಯ ಮಠಾಧೀಶರಾದ ಪರಮಪೂಜ್ಯ ಮಹಾತಪಸ್ವಿ ಪರಮದಾಸೋಹಿ ಲಿಂ. ಶ್ರೀ ವಿಜಯ ಮಹಾಂತ ಶಿವಯೋಗಿಗಳವರು ವಿಶ್ವಗುರು ಬಸವಣ್ಣನವರ ವಚನಗಳನ್ನು 'ಅಪ್ಪನವರ ವಚನಗಳು' ಎಂದು ಭಕ್ತಿಯಿಂದ ಬೆನ್ನಿಗೆ ಕಟ್ಟಿಕೊಂಡು ಪಾರಾಯಣ ಮಾಡುತ್ತಾ, ನಾಡನ್ನೆಲ್ಲ ಸಂಚರಿಸುತ್ತಾ ಶಿವಾನುಭವ ಬೋಧಿಸುತ್ತಾ ಮಹಾಲಿಂಗದೊಳು ಬಯಲಾದರು.

ಈ ಚಿತ್ತರಗಿ ಚಿಜ್ಯೋತಿಯ ಬಸವಜ್ಯೋತಿಯಾಗಿ ೧೯ನೆಯ ಪೀಠಾಧಿಪತಿಗಳಾಗಿರುವ ಪೂಜ್ಯ ಶ್ರೀ ಡಾ॥ ಮಹಾಂತ ಶಿವಯೋಗಿಗಳು ೧೯೭೦ ರಿಂದ ಇಂದಿನ ವರೆಗೆ ಚಿತ್ತರಗಿ ಪೀಠದ ಕೀರ್ತಿಯನ್ನು ಭಾರತದಾಂತ್ಯ, ಸಪ್ತ ಸಮುದ್ರಗಳಾಚೆ ಪಾಶ್ಚಿಮಾತ್ಯ ದೇಶಗಳಾದ ಯುರೋಪಖಂಡದ ಇಂಗ್ಲೆಂಡ, ಸ್ಕಾಟಲ್ಯಾಂಡ್, ಐರ್ಲ್ಯಾಂಡ ಮುಂತಾದ ದೇಶಗಳವರೆಗೂ ಹಬ್ಬಿಸಿದರು.

ಈ ಪೂಜ್ಯರ ಹಾಗೂ ಬಸವಭಕ್ತರ, ನಾಡಿನ ಹರ ಗುರು ಚರಮೂರ್ತಿಗಳ ಸಮ್ಮುಖದಲ್ಲಿ ದಿನಾಂಕ : ೧೨-೦೯-೨೦೦೪ ರಂದು ನಡೆದ ಪಟ್ಟಾಧಿಕಾರ ಮಹೋತ್ಸವದಲ್ಲಿ **೨೦ ನೆಯ ಅಧಿಪತಿಗಳಾಗಿ** ಜಂಗಮಸ್ಥಲ ಪಡೆದು, ಸಮಾಜ ಸೇವಾ ದೀಕ್ಷೆಗೆ ಅಣಿಯಾದವರು ಪೂಜ್ಯ ಶ್ರೀ ಮನಿಪ್ರ ಗುರುಮಹಾಂತಸ್ವಾಮಿ-ಗಳವರು.

ಅಂದು ಬೆಳಿಗ್ಗೆ ೫-೦೦ ಗಂಟೆಗೆ ಚೆನ್ನಗಿರಿ ತಾಲೂಕಿನ ಪಾಂಡೋಮಟ್ಟಿ ವಿರಕ್ತಮಠದ ವಯೋವೃದ್ಧರೂ, ಅನುಭಾವಿಗಳೂ ಆದ ಪೂಜ್ಯ ಶ್ರೀ ಮನಿಪ್ರ ಚೆನ್ನಬಸವ ಮಹಾಸ್ವಾಮಿಗಳವರ ಜಂಗಮಹಸ್ತದಿಂದ ಶ್ರೀ ಸಿದ್ದರಾಮ ಸ್ವಾಮಿಗಳವರಿಗೆ ಬಸವಾನುಗ್ರದೊಂದಿಗೆ ಜಂಗಮಸ್ಥಲ ಪ್ರಧಾನವಾಗಿ, ಸಮಾಜ ಸೇವಾ ದೀಕ್ಷೆ ಹೊಂದಿ **'ಶ್ರೀ ಮನಿಪ್ರ ಗುರುಮಹಾಂತಸ್ವಾಮಿಗಳು' ಎಂಬ ನೂತನ ಹೆಸರಿನಿಂದ ಚಿತ್ತರಗಿ ಪೀಠ ಪರಂಪರೆಯ ೨೦ನೆಯ ಪೀಠಾಧೀಶರಾದರು.** ನಾಡಿನೆಲ್ಲೆಡೆಯಿಂದ ದಯಮಾಡಿಸಿದ್ದ ಪೂಜ್ಯರಾದ ಗದಗ, ಹುಬ್ಬಳ್ಳಿ, ಚಿತ್ರದುರ್ಗ, ನಿಡಸೋಸಿ ಜಗದ್ಗುರುಗಳವರು, ಬಸವಕಲ್ಯಾಣ, ಹುಲಸೂರು, ಭಾಲ್ಕಿ, ಗುಲಬರ್ಗಾ, ಬೆಳಗಾವಿ ಅಥಣಿ, ಬಾಗಲಕೋಟೆ, ಕೆ.ಆರ್.ಪೇಟೆ, ಬೀದರ, ಮರೆಗುದ್ದಿ, ರಬಕವಿ, ಲಿಂಗಸಗೂರು, ಬೈಲೂರು, ದಾವಣಗೆರೆ, ಧಾರವಾಡ, ಬೆಂಗಳೂರು, ತುಮಕೂರು, ಮೈಸೂರು ಶಿವಮೊಗ್ಗ, ನಿಡವಂಚ, ಮನಸೂರು, ಸಿಂದಗಿ ಮುಂತಾದ ಗುರು-ವಿರಕ್ತ ಸ್ವಾಮಿಗಳು, ಭಾರತದಾದ್ಯಂತದಿಂದ ಆಗಮಿಸಿದ್ದ ಬಸವಭಕ್ತರು, ನಾಡಿನ ಖ್ಯಾತ ಸಾಹಿತಿಗಳು, ಸಂಶೋಧಕರು, ಅನುಭಾವಿಗಳು ಪೂಜ್ಯರಿಗೆ ಶುಭ ಹಾರೈಸಿದರು. ಹಿರಿಯರಾದ ಪೂಜ್ಯ ಶ್ರೀಮನಿಪ್ರ ಮಹಾಂತಸ್ವಾಮಿಗಳು-ನೂತನ

ಪೀಠಾಧಿಪತಿಗಳಾದ ಶ್ರೀ ಮನಿಪ್ರ ಗುರುಮಹಾಂತಸ್ವಮಿಗಳವರಿಗೆ ಪ್ರತಿಜ್ಞಾ ಬೋಧಿಸಿದರು.

**ಸವದಿಯ ವಿರಕ್ತಮಠಕ್ಕೂ ಪಟ್ಟಾಭಿಷೇಕ :**

ಇದೇ ರೀತಿ ೧೯-೦೧-೨೦೦೫ ರಂದು ಸವದಿಯ ತಮ್ಮದೇ ವಿರಕ್ತಮಠಕ್ಕೂ ಪೂಜ್ಯ ಗುರುಮಹಾಂತ ಸ್ವಾಮಿಗಳವರಿಗೆ ಪಟ್ಟಾಭಿಷೇಕ ನೆರವೇರಿಸಿದರು.

**ಚಿತ್ತರಗಿ ಪೀಠದ ಚಿಜ್ಯೋತಿ-ಬಸವಜ್ಯೋತಿಯ ಬಸವಬೆಳಗು ಆಸ್ಟ್ರೇಲಿಯಕ್ಕೆ :**

ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ಅಧಿಪತಿಗಳಾದ ನಂತರ ಪೂಜ್ಯ ಗುರು ಮಹಾಂತ ಸ್ವಾಮಿಗಳು ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳ ಸೇವೆಯಲ್ಲಿ ನಿರತರಾದರು.

ಹಿರಿಯ ಪೂಜ್ಯರ ಅಣತಿಯಂತೆ ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು ೨೦೦೬ನೆಯ ಎಪ್ರೀಲ್-ಮೇ ತಿಂಗಳಲ್ಲಿ ೪೦ ದಿನಗಳ ಕಾಲ ಆಸ್ಟ್ರೇಲಿಯಾ, ನ್ಯೂಜಿಲ್ಯಾಂಡ, ಸಿಂಗಾಪುರ ದೇಶಗಳಲ್ಲಿಯ ಅಡಿಲೇಡ್, ಕ್ಯಾನಬೆರಾ, ಸಿಡ್ನಿ, ಬ್ರೆಸ್‌ಬೇನ್, ಅಕ್ಲಂಡ, ಸಿಂಗಾಪೂರ ಮಹಾನಗರ ಮುಂತಾದ ಪ್ರಾಂತಗಳಲ್ಲಿ, ಅಲ್ಲಿಯ ಸಂಘಟನೆಗಳಲ್ಲಿ, ಭಕ್ತರ ಮನೆಗಳಲ್ಲಿ ಬಸವಜಯಂತಿ ಆಚರಿಸಿ, ಬಸವ ಸಂದೇಶ ಸಾರಿದರು. ೧೦೦ ಜನರಿಗೆ ಲಿಂಗಧಾರಣೆ-ದೀಕ್ಷೆ ಮಾಡಿದರು. ಅದರಲ್ಲಿ ಮೂವರು ಕ್ರಿಶ್ಚಿಯನ್ ಪ್ರಾಧ್ಯಾಪಕರು, ವಿಜ್ಞಾನಿಗಳೂ ಲಿಂಗಸಂಸ್ಕಾರ ಪಡೆದಿರುವುದು ವಿಶೇಷವಾಗಿದೆ. ಈ ರೀತಿಯಾಗಿ ಚಿತ್ತರಗಿ ಪೀಠದ ಚಿಜ್ಯೋತಿಯು [ಲಿಂ. ವಿಜಯಮಹಾಂತಪ್ಪಸ್ವಾಮಿಗಳು] ಬಸವಜ್ಯೋತಿಯಾಗಿ [ಹಿರಿಯ ಶ್ರೀಗಳಾದ ಡಾ.ಮಹಾಂತಪ್ಪಗಳು], ಜಗಜ್ಯೋತಿಯಾಗಿ ಬಸವ ಬೆಳಕಾಗಿ ಜಗವನ್ನೆಲ್ಲಾ ಬೆಳಗುವುದರಲ್ಲಿ ಯಾವ ಸಂಶಯವೂ ಇಲ್ಲ. ಇಂತಹ ಹಿರಿಯ ಶ್ರೀಗಳನ್ನು, ಕಿರಿಯ ಶ್ರೀಗಳನ್ನು ಏಕಕಾಲಕ್ಕೆ ದರ್ಶನ ಪಡೆಯುವ, ಅವರ ಅನುಭಾವ ಅಲಿಸುವ, ಪಾದೋದಕ-ಪ್ರಸಾದಕ್ಕೆ ಪಾತ್ರರಾಗುವ ಭಾಗ್ಯ ಇಂದಿನ ಚಿತ್ತರಗಿ ಪೀಠದ ಸಮಸ್ತ ಭಕ್ತರಿಗೆ ದೊರಕಿರುವುದು ಅವರೆಲ್ಲರ ಪೂರ್ವಜನ್ಮದ ಸುಕೃತದ ಫಲವೆಂದೇ ಹೇಳಬಹುದು.

**ಆದರ್ಶ ಕಲ್ಯಾಣ ಮಹೋತ್ಸವ :**

೧೨ನೆಯ ಶತಮಾನದಲ್ಲಿ ವಿಶ್ವಗುರು ಬಸವಣ್ಣನವರು ಶರಣ ಹರಳಯ್ಯನವರ ಮಗ ಶೀಲವಂತ ಹಾಗೂ ಶರಣ ಮಧುವರಸರ ಮಗಳು ಲಾವಣ್ಯವತಿಯರ ಕಲ್ಯಾಣ ಮಹೋತ್ಸವ ಜರುಗಿಸಿ ಕ್ರಾಂತಿ ಮಾಡಿದಂತೆ, ಪೂಜ್ಯ ಮಹಾಂತ ಅಪ್ಪಗಳವರ ಸಾನಿಧ್ಯದಲ್ಲಿ ದಿನಾಂಕ : ೨೬-೧೨-೨೦೦೪ ರಂದು ಜಾತಿ, ವರ್ಗ, ವರ್ಣ, ವರದಕ್ಷಿಣೆ ರಹಿತವಾದ, ಬಸವಧರ್ಮ ಸಮ್ಮತ ಕಲ್ಯಾಣ

ಮಹೋತ್ಸವ ಜರುಗಿತು. ಲಿಂಗಗುಣ ಸಂಪನ್ನ ಚಿ॥ ಉಮೇಶ ನಾರನಾಳ ಸಾ॥ ಗಂಗಾವತಿ ಹಾಗೂ ಲಿಂಗಗುಣ ಸಂಪನ್ನೆ ಚಿ॥ ಶಿಲ್ಪಾ ಕರಡಿ ಸಾ॥ ಜಮಖಂಡಿ ಇವರು ಆದರ್ಶ ಶರಣ ದಂಪತಿಗಳಾದರು. ವರನ ಮನೆತನದವರು ಪೂರ್ವಾಶ್ರಮದಲ್ಲಿ ದಲಿತ ಜನಾಂಗದವರಾಗಿದ್ದರು. ಪೂಜ್ಯರಿಂದ ೨೫ ವರ್ಷಗಳ ಹಿಂದೆ ಶರಣ ಸಿ.ಎಸ್.ನಾರನಾಳ ಕುಟುಂಬದವರೆಲ್ಲ ಲಿಂಗದೀಕ್ಷೆ ಹೊಂದಿ ಬಸವಧರ್ಮಿಯರಾಗಿದ್ದರು. ವಧುವಿನ ಮನೆಯವರು ಪೂರ್ವಾಶ್ರಮದಲ್ಲಿ ಸಂಪ್ರದಾಯದ ಲಿಂಗಾಯತ ಪಂಗಡದವರಾಗಿದ್ದು, ಪೂಜ್ಯ ಮಹಾಂತಪ್ಪಗಳಿಂದ ದೀಕ್ಷೆ ಹೊಂದಿ ಬಸವಧರ್ಮಿಯರಾಗಿದ್ದರು. ಈ ರೀತಿ ಬಸವಧರ್ಮಿಯರಾದ ಎರಡು ಮನೆತನಗಳು ಈ ಕಲ್ಯಾಣ ಮಹೋತ್ಸವದ ಮೂಲಕ ಬಸವಭಕ್ತರಿಗೆ ಶರಣರ ಆದರ್ಶವನ್ನು ಆಚರಿಸಿ ತೋರಿವೆ.

**ಧಾರವಾಡದಲ್ಲಿ ಗುರುಬಸವ ಮಹಾಂತ ಟ್ರಸ್ಟ- ಉದ್ಘಾಟನೆ :**

ಚಿತ್ತರಗಿ ಸಂಸ್ಥಾನ ಮಠ ಇಳಕಲ್ಲದ ಪರಮ ಭಕ್ತರಾದ ಧಾರವಾಡದ ಗಾಂಧೀನಗರದಲ್ಲಿರುವ ಶರಣದಂಪತಿ ಶ್ರೀ ರಮೇಶ ತುಂಬರಗುದ್ದಿ ಹಾಗೂ ಶ್ರೀಮತಿ ರಾಜೇಶ್ವರಿ ಅವರ ಭವ್ಯ ಮನೆ 'ಶ್ರೀ ವಿಜಯಮಹಾಂತ ನಿಲಯ' ದಲ್ಲಿ ಪೂಜ್ಯ ಶ್ರೀ ಮಹಾಂತ ಸ್ವಾಮಿಗಳು ೨೦೦೮ ಮಾರ್ಚ, ೯ ರಂದು 'ಗುರುಬಸವ ಮಹಾಂತ ಟ್ರಸ್ಟ'ನ್ನು ಉದ್ಘಾಟಿಸಿದರು. ಈ ಸಂಸ್ಥೆಯು ಬಸವಾದರ್ಶಗಳನ್ನು ಜಾರಿಗೆ ತರುತ್ತಿದೆ.

**ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪ್ರಶಸ್ತಿ :**

ಮಹಾಂತ ಜೋಳಿಗೆಯ ಶಿವಶಿಲ್ಪಿಗಳೂ, ಬಸವತತ್ವನಿಷ್ಠ ಸಮಾಜ ಸುಧಾರಕರೂ ಆಗಿರುವ ಪೂಜ್ಯಶ್ರೀ ಮಹಾಂತ ಶಿವಯೋಗಿಗಳ ಜೀವಮಾನದ ಸಾಧನೆಯನ್ನು ಅರಿತು, **ಕರ್ನಾಟಕ ವಿಶ್ವವಿದ್ಯಾಲಯವು ಜನೇವರಿ ೨೧, ೨೦೦೯ರಂದು ೫೯ನೆಯ ಘಟೋಕೋತ್ಸವದಲ್ಲಿ ಪೂಜ್ಯರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಗೌರವಿಸಿತು.** ಪೂಜ್ಯರನ್ನು ಗೌರವಿಸಿ ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಘನತೆಯನ್ನು ಇನ್ನಷ್ಟು ಹೆಚ್ಚಿಸಿಕೊಂಡಿತೆನ್ನಬಹುದು. ಅಂದಿನ ಘಟಿಕೋತ್ಸವ ಸಮಾರಂಭದಲ್ಲಿ ಕರ್ನಾಟಕ ಘನತೆವೆತ್ತ ರಾಜ್ಯಪಾಲರೂ, ಕ.ವಿ.ವಿ.ಯ ಕುಲಾಧಿಪತಿಗಳೂ ಆದ ಶ್ರೀ ರಾಮೇಶ್ವರ ಠಾಕೂರ ಅವರು, ಕ.ವಿ.ವಿ. ಕುಲಪತಿಗಳಾದ ಡಾ. ಎಸ್. ಕೆ. ಸೈದಾಪುರ ಅವರು ಪೂಜ್ಯರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ ಪ್ರದಾನ ಮಾಡಿದರು.

**ಶರಣೆ ಬಸವಾಂಜಲಿ ಅವರಿಗೆ ನಿರಂಜನ ಜಂಗಮದೀಕ್ಷೆ :**

೧೨ ನೆಯ ಶತಮಾನದಲ್ಲಿ ಎಲ್ಲಾ ರಂಗಗಳಲ್ಲಿ ಸ್ತ್ರೀ-ಪುರುಷ ಸಮಾನತೆಯನ್ನು ತಂದವರು ವಿಶ್ವಗುರು ಬಸವಣ್ಣನವರು. ಕಲ್ಯಾಣ ಕ್ರಾಂತಿಯ

ತರುವಾಯ ಮಠ–ಪೀಠಗಳು ಪ್ರಾರಂಭವಾಗಿ ಕೇವಲ ಪುರುಷರು ಮಾತ್ರ ಗುರು–ವಿರಕ್ತ ಮಠ–ಪೀಠಗಳಿಗೆ ದೀಕ್ಷೆ ಹೊಂದಿ ಸ್ವಾಮಿಗಳಾಗತೊಡಗಿದರು. ಇದನ್ನರಿತಿದ್ದ ಪೂಜ್ಯರು ಇತ್ತೀಚಿಗೆ ದಿನಾಂಕ: ೧೧–೦೩–೨೦೧೦ ರಂದು ಪೂಜ್ಯ ಮಹಾಂತ ಶಿವಯೋಗಿಗಳು **ಬೀದರ ಜಿಲ್ಲೆಯ ಮಲಕಾಪುರ ಗ್ರಾಮದ ಶರಣಗಿರಿಯ ಶರಣೆ ಬಸವಾಂಜಲಿ ತಾಯಿಯವರಿಗೆ ನಿರಂಜನ ಜಂಗಮಸ್ಥಲ ಕರುಣಿಸಿ** [ಚಿನ್ಮಯಾನುಗ್ರಹ ದೀಕ್ಷೆಯೊಂದಿಗೆ] ಶ್ರೀಮನಿಪ್ರ ಬಸವಾಂಜಲಿ ಸ್ವಾಮಿಗಳೆಂದು ನಾಮಕರಣ ಮಾಡಿ ಶರಣಗಿರಿಮಠಕ್ಕೆ ಅಧಿಪತಿಯಾಗಿ ಮಾಡಿದ್ದು ವಿನೂತನ ಘಟನೆ, ದಾಖಲೆಯಾಗಿದೆ.

**ನಾಗನೂರಿನ ಶರಣದಂಪತಿಗಳಿಗೆ ನಿರಂಜನ ಜಂಗಮದೀಕ್ಷೆ :**

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನಲ್ಲಿ ನಾಗನೂರ ಎಂಬ ಚಿಕ್ಕ ಗ್ರಾಮವಿದೆ. ಈ ಗ್ರಾಮದಲ್ಲಿ ಬಸವತತ್ವನಿಷ್ಠ ಶರಣದಂಪತಿಳಾದ **ಶ್ರೀ ಪ್ರಕಾಶ ಹಾಗೂ ಶ್ರೀಮತಿ ಬಸವಗೀತಾ** ಎಂಬುವರು **'ಗುರುಬಸವ ಮಠ'** ಎಂಬ ಸ್ವತಂತ್ರ ಮಠ ಕಟ್ಟಿಕೊಂಡು ಬಸವತತ್ವ ಪ್ರಸಾರ ಗೈಯುತ್ತಾ, ಪ್ರವಚನಕಾಯಕವನ್ನು ನಿರ್ವಹಿಸುತ್ತಿದ್ದಾರೆ. ಈ ಶರಣ ದಂಪತಿಗಳ ಧರ್ಮಪ್ರಸಾರದ ಕಳಕಳಿಯನ್ನು ಬಹಳ ವರ್ಷಗಳಿಂದ ಬಲ್ಲಂತಹ ಪೂಜ್ಯ ಮಹಾಂತ ಅಪ್ಪಗಳು ನಾಗನೂರು ಗ್ರಾಮದ ಭಕ್ತರ ಅಪೇಕ್ಷೆಯಂತೆ ದಿನಾಂಕ :೦೧–೦೩–೨೦೧೧ ರಂದು ನಾಗನೂರಿನ **ಗುರುಬಸವ ಮಠದಲ್ಲಿ ದಂಪತಿಗಳಿಬ್ಬರಿಗೂ ಚಿನ್ಮಯಾನುಗ್ರಹ ದೀಕ್ಷೆ ಮಾಡಿ 'ಜಂಗಮಸ್ಥಲ' ಕರುಣಿಸಿ** ನಿರಂಜನ ಜಂಗಮದೀಕ್ಷೆ ಮಾಡಿ, ಗುರುಬಸವಮಠಕ್ಕೆ ದಂಪತಿಗಳಿರ್ವರನ್ನೂ ಸ್ವಾಮಿಗಳಾಗಿಸಿ ಪಟ್ಟಾಭಿಷೇಕ ನೆರವೇರಿಸಿದುದು ಚರಿತ್ರಾರ್ಹ ಘಟನೆಯಾಗಿದೆ.

**ಶಿಕ್ಷಣ ಸಂಸ್ಥೆಗಳ ಅಧ್ಯಕ್ಷರಾಗಿ ಮಾರ್ಗದರ್ಶನ :**

ಪೂಜ್ಯಶ್ರೀ ಮಹಾಂತ ಶಿವಯೋಗಿಗಳು ಚಿತ್ತರಗಿ ಪೀಠಕ್ಕೆ ಅಧಿಪತಿಗಳಾಗಿ ಬಂದನಂತರ ಅನೇಕ ಶಿಕ್ಷಣ ಸಂಸ್ಥೆಗಳಿಗೆ ಅಧ್ಯಕ್ಷರಾಗಿ ಸಾತ್ವಿಕ ಮಾರ್ಗದರ್ಶನ ನೀಡಿದ್ದಾರೆ–

೧. ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ, ಇಳಕಲ್ಲ.

೨. ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ, ಹುನಗುಂದ.

೩. ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ.

೪. ಚಿತ್ತರಗಿ ಶ್ರೀ ವಿಜಯಮಹಾಂತೇಶ ಎಜ್ಯುಕೇಶನ್ ಸೊಸೈಟಿ ಇಳಕಲ್ಲ.

೫. ಕೆರೂರಿನ ಎಜ್ಯುಕೇಶನ್ ಸಂಸ್ಥೆ ಕೆರೂರು ತಾ॥ ಬದಾಮಿ ಮುಂತಾದವು.

**ವ್ಯಸನಮುಕ್ತ ದಿನಾಚರಣೆ :**

**ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳ ಜನ್ಮದಿನವಾದ ಅಗಷ್ಟ–೧ ನ್ನು**

ಪ್ರತಿವರುಷ 'ವ್ಯಸನ ಮುಕ್ತ ದಿನ' ವೆಂದು ಹೆಸರಿಸಿ ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳ ನೇತೃತ್ವದಲ್ಲಿ ಶ್ರೀಮಠದ ಭಕ್ತರೆಲ್ಲ ವೈಭವಪೂರ್ಣವಾಗಿ ಆಚರಿಸುತ್ತಾರೆ. ಅಂದು 'ಮಹಾಂತ ಜೋಳಿಗೆ'ಯ ಸಂಚಾರವನ್ನು ಮಾಡಿ, ದುರ್ವ್ಯಸನ, ದುಶ್ಚಟಗಳನ್ನು ಜೋಳಿಗೆಗೆ ಹಾಕಿಸಿಕೊಂಡು ಭಕ್ತರಿಗೆ ಕಲ್ಯಾಣವಾಗಲೆಂದು ಶುಭ ಹಾರೈಸುವ ಹಬ್ಬವಾಗಿ ಆಚರಿಸಲಾಗುತ್ತದೆ. ಕರ್ನಾಟಕ ಸರಕಾರವೂ ಈ ದಿನವನ್ನು ವ್ಯಸನಮುಕ್ತ ದಿನಾಚರಣೆಯಾಗಿ ಆಚರಿಸಲು ಆದೇಶ ನೀಡಿದೆ.

**ಕರ್ನಾಟಕ ಸರಕಾರದ-ಸಂಯಮ ಪ್ರಶಸ್ತಿ :**

ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು ೧೯೭೬ ರಿಂದ ಮುನ್ನಡೆಸಿಕೊಂಡು ಬಂದಿರುವ 'ಮಹಾಂತ ಜೋಳಿಗೆ' ಕಾರ್ಯಕರ್ಮಗಳಲ್ಲಿ ತಂಬಾಕು-ಗುಟುಕಾ, ಸೆರೆ-ಸಿಂದಿ ಮುಂತಾದ ಚಟಗಳನ್ನು ತಮ್ಮ ಜೋಳಿಗೆಗೆ ಭಿಕ್ಷೆಹಾಕಿಸಿಕೊಂಡು ಇಲ್ಲಿಯುವರೆಗೆ ಲಕ್ಷಾಂತರ ಜನರನ್ನು ವ್ಯಸನ ಮುಕ್ತರನ್ನಾಗಿಸಿದ್ದುದನ್ನು ಅರಿತ ಕರ್ನಾಟಕ ಸರಕಾರದ ಮಧ್ಯಪಾನ ಸಂಯಮ ಮಂಡಳಿಯು ೨೦೧೨ನೆಯ ಇಸ್ವಿಯಲ್ಲಿ ಪೂಜ್ಯರಿಗೆ 'ಸಂಯಮ ಪ್ರಶಸ್ತಿ' ಯೊಂದಿಗೆ ಒಂದು ಲಕ್ಷ ರೂಪಾಯಿ ಗೌರವ ಧನ ಅರ್ಪಿಸಿ ಗೌರವಿಸಿದೆ.

**ರಾಷ್ಟ್ರೀಯ ಬಸವ ಪುರಸ್ಕಾರ :**

ಪೂಜ್ಯ ಮಹಾಂತ ಅಪ್ಪಗಳವರ ದೀನ-ದಲಿತೋದ್ಧಾರ, ಅಸ್ಪೃಶ್ಯತಾ ನಿವಾರಣೆ, ಜಾತ್ಯಾತೀತ ಮನೋಭಾವ, ಮಾನವೀಯ ಕಳಕಳಿಯು ಬಸವತತ್ವ ನಿಜಾಚರಣೆಯನ್ನು ಮನಗಂಡಂತಹ ಕರ್ನಾಟಕ ಸರಕಾರವು ೨೦೧೨ನೆಯ ಇಸ್ವಿಯಲ್ಲಿ 'ರಾಷ್ಟ್ರೀಯ ಬಸವ ಪುರಸ್ಕಾರ' ಗೌರವ ಪ್ರಶಸ್ತಿ ಹಾಗೂ ಹತ್ತು ಲಕ್ಷ ರೂಪಾಯಿಗಳನ್ನು ನೀಡಿ ಗೌರವಿಸಿದೆ.

**೧೧ ಜನ ಶರಣ ಸಾಹಿತಿಗಳಿಗೆ ಭಕ್ತಿ ಕಾಣಿಕೆ ಅರ್ಪಿಸಿದ್ದು :**

ಪೂಜ್ಯರು ತಮಗೆ ಅರ್ಪಿತವಾಗಿದ್ದ ಒಟ್ಟು ೧೧ ಲಕ್ಷ ರೂಪಾಯಿಗಳನ್ನು ಬಸವತತ್ವದ ಧ್ಯೇಯಾದರ್ಶಗಳಿಗಾಗಿ ಶ್ರಮಿಸುತ್ತಿರುವ ನಾಡಿನ ೧೧ ಜನ ಶರಣ ಸಾಹಿತಿಗಳನ್ನು ಅವರವರ ಊರು ಮನೆಗಳಿಗೆ ಹೋಗಿ ಒಂದೊಂದು ಲಕ್ಷ ರೂಪಾಯಿ ಹಾಗೂ ಶಾಲು-ಫಲ-ಪುಷ್ಪ-ವಚನಗ್ರಂಥಗಳೊಂದಿಗೆ- 'ಇದು ಬಸವ ಪ್ರಸಾದ ದಯವಿಟ್ಟು ಸ್ವೀಕರಿಸಿರಿ' ಎಂದು ಕಿಂಕರ ಭಾವದಿಂದ ಅರ್ಪಿಸಿದ್ದಾರೆ. 'ಎನ್ನ ಬಚ್ಚಬರಿಯ ಬಸವನೆಂದೆನಿಸಯ್ಯಾ' ಎಂಬಂತೆ ಬಯಲು ಮೂರ್ತಿಯಾಗಿ ಗುರು-ಜಂಗಮ-ಶರಣರಿಗೆಲ್ಲ ಆದರ್ಶರಾಗಿದ್ದಾರೆ.

**ಬಸವತತ್ವದ ಮಹಾ ದಂಡನಾಯಕರು :**

ಗದಗ-ಡಂಬಳದ ಪೂಜ್ಯ ಜಗದ್ಗುರು ಡಾ.ತೋಂಟದ ಸಿದ್ಧಲಿಂಗ

ಮಹಾಸ್ವಾಮಿಗಳವರು– 'ಪೂಜ್ಯ ಮಹಾಂತಪ್ಪಗಳು ನಮ್ಮ ದಿನಮಾನದ ಬಸವ ತತ್ವದ ಮಹಾದಂಡನಾಯಕರು' ಎಂದು ಅಭಿಮಾನದಿಂದ ಘೋಷಿಸಿ ಪ್ರಶಸ್ತಿಯೊಂದಿಗೆ ಗೌರವಿಸಿದ್ದಾರೆ.

**ಪೂಜ್ಯ ಮಹಾಂತಪ್ಪಗಳು ಮಾಡಿದ ಸಮಾಜೋ–ಧಾರ್ಮಿಕ ಪರಿವರ್ತನೆಗಳು :**

'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ' ಎಂಬ ಧರ್ಮಪಿತ ಬಸವಣ್ಣನವರ ಸಂದೇಶದಂತೆ, ಪೂಜ್ಯ ಮಹಾಂತ ಶಿವಯೋಗಿಗಳು ಕೇವಲ ಉಪದೇಶ ಮೂಲಕ ಸಮಾಜವನ್ನು ತಿದ್ದಿಕೊಳ್ಳಿರಿ ಎಂದು ಹೇಳಲು ಹೋಗದೇ, ಸ್ವತಃ ತಾವು ಮೊದಲಿಗೆ ಮಠಗಳ ಸಂಪ್ರದಾಯದಿಂದ ಬಂದ ಮೌಢ್ಯವನ್ನು ಬಸವಾದಿ ಶರಣರ ವಚನಗಳ ಬೆಳಕಿನಲ್ಲಿ ದೂರಮಾಡಿಕೊಂಡು, ತಮ್ಮ ಆಚರಣೆಯ ಮೂಲಕವೇ ಸಮಾಜಕ್ಕೆ ಮಾರ್ಗದರ್ಶಿಯಾಗಿದ್ದಾರೆ.

೧೨ ನೆಯ ಶತಮಾನವನ್ನು 'ಬಸವಯುಗ' ವೆನ್ನುವುದಾದರೆ ೨೧ ನೆಯ ಶತಮಾನವನ್ನು 'ಮಹಾಂತ ಬಸವಯುಗ'ವೆಂದು ಧೈರ್ಯವಾಗಿ ಹೇಳಬಹುದಾದ ಬಸವ ಕ್ರಾಂತಿಯ ನೇತಾರ ಪೂಜ್ಯಮಹಾಂತಪ್ಪಗಳವರು. ಈ ಪೂಜ್ಯರ ಜೀವಿತ ಕಾಲದಲ್ಲಿ ಬದುಕಿರುವ ಭಾಗ್ಯ ಚಿತ್ತರಗಿ ಪೀಠದ ಭಕ್ತರದಾಗಿದೆ. ಸರ್ವರೂ ಪೂಜ್ಯರು ನಡೆದು ತೋರಿದ ಬಸವಬೆಳಗಿನಲ್ಲಿ, ಶರಣ ಮಾರ್ಗದಲ್ಲಿ ಮುನ್ನಡೆಯುವಂತಾದರೆ ಎಲ್ಲರ ಜೀವನ ಪಾವನ.

**ಭಕ್ತ–ಜಂಗಮ ಸಾಮರಸ್ಯ ಸಾಧಿಸಿದ ಮಹಾಂತರು :**

ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಇದು ಬಸವಪರಂಪರೆಯ ಮಠವಾಗಿದ್ದು ಇಲ್ಲಿ ಸದಾಕಾಲವೂ ಭಕ್ತ–ಜಂಗಮ ಸಾಮರಸ್ಯವು ಹಾಲು–ಜೇನಿನಂತೆ ಮಧುರವಾಗಿದೆ. ಆಗಾಗ ಒಂದೊಂದು ಸಲ ಯಾರ್‍ಯಾರದೋ ಮಾತುಕೇಳಿ ಕೆಲವರು ಬಿರುಗಾಳಿಗೆ ಸಿಕ್ಕ ಗಿಡ–ಬಳ್ಳಿಗಳಂತೆ ಹೊಯ್ದಾಡುತ್ತಾರೆ. ಬಿರುಗಾಳಿ ದಾಟಿ ಹೋದ ನಂತರ ಮತ್ತೆ ಗಟ್ಟಿಯಾಗಿ, ದೃಢವಾಗಿ ನಿಲ್ಲುತ್ತಾರೆ, ಇದು ನಿಸರ್ಗದ ನಿಯಮವಾಗಿದೆ.

ಪರಮಪೂಜ್ಯ ಶ್ರೀ ಮ.ನಿ.ಪ್ರ ಗುರುಮಹಾಂತ ಸ್ವಾಮಿಗಳವರ ಪಟ್ಟಾಭಿಷೇಕದ ಪೂರ್ವದಲ್ಲಿ ದಿನಾಂಕ : ೩೦–೦೮–೨೦೦೪ರಂದು ಇಳಕಲ್ಲದಲ್ಲಿ ಜರುಗಿದ ದುರ್ಘಟನೆಯಿಂದಾಗಿ ಚಿತ್ತರಗಿ ಮಠಕ್ಕೆ ಹೋಗದೆ ಪೂಜ್ಯರಾದ ಡಾ॥ ಮಹಾಂತ ಶಿವಯೋಗಿಗಳು ಹಾಗೂ ಶ್ರೀ ಗುರುಮಹಾಂತ ಸ್ವಾಮಿಗಳು ನಿರ್ಲಿಪ್ತರಾಗಿ ಇಳಕಲ್ಲ ಶ್ರೀಮಠದಲ್ಲಿಯೇ ಉಳಿದರು. ಅದೊಂದು ವಿಷಗಳಿಗೆ ! ಈ ವಿಷಗಳಿಗೆ ದೂರಾಗಲು ೧೨ ವರುಷ ಬೇಕಾಯಿತು !!

ಚಿತ್ತರಗಿ ಭಕ್ತರ ಹೃದಯ ಪೂಜ್ಯರಿಗಾಗಿ ಹಂಬಲಿಸುತ್ತಿತ್ತು. ಪೂಜ್ಯರು ಕೂಡ ಭಕ್ತರನ್ನು ಕಾಣಲು ಹಾತೊರೆಯುತ್ತಿದ್ದರು. ಅಂತೂ ಆ ಮಂಗಲಮಯ ದಿನ ಬಂತು. ದಿನಾಂಕ :೨೦-೦೩-೨೦೧೬ ರವಿವಾರ ಚಿತ್ತರಗಿ ಪೀಠದ ಸಹಸ್ರಾರು ಭಕ್ತರು ಹಿರಿಯ ಹಾಗೂ ಕಿರಿಯ ಗುರುಗಳಿಬ್ಬರನ್ನೂ ಇಳಕಲ್ಲರಿಂದ ಚಿತ್ತರಗಿಗೆ ಬರಮಾಡಿಕೊಂಡರು. ಹೊಸಪೇಟೆ, ಹಾಳಕೆರೆ, ಜಮಖಂಡಿ, ಗುಳೇದಗುಡ್ಡ, ಶಿರೂರ, ರಬಕವಿ, ಸತ್ತಿ, ಸಿದ್ಧಯ್ಯನಕೋಟೆ, ಲಿಂಗಸಗೂರು ಮುಂತಾದ ಪೂಜ್ಯರು, ಹುನಗುಂದ ಶಾಸಕರಾದ ಶ್ರೀ ವಿಜಯಾನಂದ ಕಾಶಪ್ಪನವರ, ಬಾಗಲಕೋಟೆಯ ಶ್ರೀ ವೀರಣ್ಣ ಚರಂತಿಮಠ ಮಾಜಿ ಶಾಸಕರು, ಹುನಗುಂದದ ಶ್ರೀ ದೊಡ್ಡನಗೌಡ ಪಾಟೀಲ ಮಾಜಿ ಶಾಸಕರು, ಕುಷ್ಟಗಿಯ ಶ್ರೀ ಕೆ.ಶರಣಪ್ಪ ಮಾಜಿ ಶಾಸಕರು, ಡಾ. ಶಂಭು ಬಳಿಗಾರ ಜಾನಪದ ವಿದ್ವಾಂಸರು, ಶ್ರೀ ಡಾ.ಮಲ್ಲಣ್ಣ ನಾಗರಾಳ ಕೃಷಿ ತಜ್ಞರು, ಇಳಕಲ್ಲ ಅಕ್ಕನಬಳಗದ ತಾಯಂದಿರು, ಚಿತ್ತರಗಿ ಪೀಠದ ಎಲ್ಲಾ ಶಾಖಾಮಠಗಳ ಭಕ್ತರು ಆಗಮಿಸಿದ್ದರು. ಚಿತ್ತರಗಿ ಗ್ರಾಮದ ಮಹಾದ್ವಾರದಲ್ಲಿ ಉಭಯ ಶ್ರೀಗಳವರ ಪಾದಕ್ಕೆ ನೀರು ಹಾಕಿ, ಪಾದಪೂಜೆ ಗೈದು ಶ್ರೀಮಠಕ್ಕೆ ಕರೆದೊಯ್ದರು.

ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳವರ ಸದುವಿನಯ, ಸದಾಚಾರ, ಸದ್ಭಾವನೆಯ ಸೇವೆಯು ಚಿತ್ತರಗಿ ಪೀಠದ ಭಕ್ತರ ಹೃದಯವನ್ನು ಗೆದ್ದಿತು. ಸೇವೆಯಿಂದ ಸ್ವಾಮಿತ್ವ ಎಂಬುದನ್ನು ಭಕ್ತರು ಅರಿತರು. ಗುರುವಿನಲ್ಲಿ ಕುಲವಿಲ್ಲ, ಜಂಗಮದಲ್ಲಿ ಜಾತಿ ಇಲ್ಲ ಎಂಬ ಬಸವತತ್ವದ ಧ್ವಜ ಎಲ್ಲೆಡೆಯಲ್ಲಿ ವಿಜೃಂಭಿಸಿತು. ಭಕ್ತ-ಜಂಗಮ ಸಾಮರಸ್ಯವನ್ನು ಜ್ಯೋತಿ ಮುಟ್ಟಿ ಜ್ಯೋತಿಯಾಗುವ, ಗುರುಮಟ್ಟಿ ಗುರುವಾಗುವ ಶರಣ ಸಿದ್ಧಾಂತವನ್ನು ಚಿತ್ತರಗಿ ಪೀಠವು ಜಗತ್ತಿಗೆ ಸಾರಿತು.

**ಬಸವ ಮಹಾಬಯಲಿನಲಿ ಬಯಲಾದ ಮಹಾಂತರು :**

ಪರಮಪೂಜ್ಯ ಮಹಾಂತ ಶಿವಯೋಗಿಗಳು ಅಖಂಡ ೮೮ ವರುಷಗಳ ಕಾಲ ಅವಿಶ್ರಾಂತವಾಗಿ ಬಸವತತ್ವ ಪ್ರಸಾರದ ಮಹಾಣಿಹ ಪೂರೈಸಿ ದುಡಿದು ದುಡಿದು ಹಣ್ಣಾದ ಶರೀರ ನೋವುಗಳನ್ನೆಲ್ಲ ಸಹಿಸಿಕೊಂಡ ಮನಸ್ಸು, ನಿರ್ಲಿಪ್ತವಾದ ಭಾವದೊಂದಿಗೆ- 'ಬಂದ ಮಣಿಹ ಪೂರೈಸಿತೆಂಬ ಸಂತೃಪ್ತಿ, ಅಂದಂದಿಗೆ ನೂರು ತುಂಬಿದಂತಿರಬೇಕು' ಎಂಬ ಶರಣರ ವಾಣಿಯಂತೆ ಬಸವ ಮಹಾಬಯಲಿನಲಿ ಬಯಲಾಗಬೇಕೆಂಬ ನಿರ್ಧಾರ ಗಟ್ಟಿಗೊಂಡಿತ್ತು.

ಪೂಜ್ಯರನ್ನು ೧೪ ವರುಷಗಳ ಕಾಲ (೨೦೦೪ ರಿಂದ ೨೦೧೮) ತಾಯಿಯಂತೆ ಹಗಲಿರುಳು ಜೋಪಾನವಾಗಿ ಆರೈಕೆ ಮಾಡಿದ ಮಾತೃಹೃದಯಿ ಗುರುಮಹಾಂತ ಸ್ವಾಮಿಗಳು ಧನ್ಯರು. ಬೆಳಗಾವಿಯ ಕೆ.ಎಲ್.ಇ. ಆಸ್ಪತ್ರೆಯಲ್ಲಿ ಪೂಜ್ಯರ ಸೇವೆ ಮಾಡಿದ ಶ್ರೀ ಗುರುಮಹಾಂತಪ್ಪಗಳು, ಶ್ರೀ ಶಾಂತಣ್ಣಾ ಸರಗಣಾಚಾರಿ, ಶ್ರೀ ಗುರುಬಸವದೇವರು, ಸೇವಾಮರಿ ಶ್ರೀ ಸಂಗಣ್ಣ, ಶ್ರೀ ಸಂಗಮೇಶ ಅವಟಿ

ವಾಹನ ಚಾಲಕರು ಹಾಗೂ ತಿಂಗಳಾನುಗಟ್ಟಲೇ ಮೂರು ಹೊತ್ತು ಶ್ರೀಮಠದಿಂದ ಪ್ರಸಾದ ಸಿದ್ಧಪಡಿಸಿ ಕಳಿಸಿಕೊಡುತ್ತಿದ್ದ ಬೆಳಗಾವಿ-ನಾಗನೂರ ರುದ್ರಾಕ್ಷಿಮಠದ ಪೂಜ್ಯ ಶ್ರೀ ಸಿದ್ಧರಾಮ ಸ್ವಾಮಿಗಳ ಸೇವೆ ವರ್ಣಿಸಲಸಾಧ್ಯ !

ದಿನಾಂಕ ೧೭-೦೫-೨೦೧೮ ರಂದು ಬೆಳಿಗ್ಗೆ ೧೦:೩೦ ಗಂಟೆಗೆ ಕೆ.ಎಲ್.ಇ. ಆಸ್ಪತ್ರೆಯಲ್ಲಿದ್ದ ಪೂಜ್ಯರ ದರ್ಶನಕ್ಕೆ ನಾನು (ಸಿದ್ಧಣ್ಣ ಲಂಗೋಟಿ) ಹಾಗೂ ಶ್ರೀಮತಿ ಕಲ್ಯಾಣಮ್ಮ ಲಂಗೋಟಿ ಮತ್ತು ಚಿ. ಚೆನ್ನಬಸವಣ್ಣ ಹೋಗಿದ್ದೆವು. ಎರಡು ತಾಸು ಮಾತನಾಡುತ್ತ ಕುಳಿತಿದ್ದೆವು. ಅಂದು ಪೂಜ್ಯರು ಚಿತ್ತರಗಿ ಪೀಠದ ಪಟ್ಟಾಧಿಕಾರವಾಗಿ ೪೮ ವರುಷ ಪೂರ್ಣಗೊಂಡ ದಿನವಾಗಿತ್ತು. ಇದನ್ನು ನೆನಪಿಸಿದೆನು. 'ಶರಣರೆ, ಇನ್ನೂ ಎಷ್ಟು ದಿನ ಹೀಗೆ ಇರುವುದು? ಬಸವಣ್ಣನವರು ಬೇಗನೆ ಕರೆದುಕೊಳ್ಳಬೇಕು' ಎಂದರು. ಆಗ ನಾನು- 'ಅಪ್ಪಾ ಅವರೆ, ತಾವು ಹೀಗೇಕೆ ಬಯಸುತ್ತಿರುವಿರಿ? ಇಂದಿಗೆ ಚಿತ್ತರಗಿ ಪೀಠಾಧಿಪತಿಯಾಗಿ ೪೮ ವರ್ಷ ತುಂಬಿವೆ. (ನಾಲ್ಕು ಪಟ್ಟ ೧೨ x ೪ = ೪೮ ವರ್ಷ) ಇನ್ನೆರಡು ವರುಷಕ್ಕೆ ತಮ್ಮ ಪಟ್ಟಾಧಿಕಾರದ ಸುವರ್ಣ ಮಹೋತ್ಸವ, ಅನಂತರ ಹತ್ತು ವರುಷವಾದರೆ ತಮ್ಮ ಜನ್ಮ ಶತಮಾನೋತ್ಸವ ಆಚರಿಸಬೇಕಾಗಿದೆ. ತಾವು ನೂರೊಂದು ಸ್ಥಲದ ವಿರಕ್ತರು ನೂರೊಂದರ ನಂತರ ಅಪ್ಪ ಬಸವಣ್ಣನವರು ತಮ್ಮನ್ನು ಕರೆದುಕೊಳ್ಳುತ್ತಾರೆ. ಅಲ್ಲಿಯವರೆಗೆ ತಾವು ನಮ್ಮ ಮಧ್ಯದಲ್ಲಿರುತ್ತೀರಿ.... ಎಂದೆ.

ಪೂಜ್ಯರು ಸ್ವಲ್ಪ ಹೊತ್ತು ಮೌನವಾಗಿದ್ದು- 'ಶರಣರೆ, ಅಪ್ಪ ಬಸವಣ್ಣನವರು ಅಂದಂದಿಗೆ ನೂರು ತುಂಬಿದಂತಿರಬೇಕು. ಎಂದು ಹೇಳಿದ್ದಾರಲ್ಲ! ನಮಗಿಂದು ನೂರು ವರುಷ ತುಂಬಿದೆ ಎಂದು ಅನಿಸುತ್ತಿದೆ' ಎಂದು ನುಡಿದು ನಮ್ಮನ್ನು ಕರುಣಾದೃಷ್ಟಿಯಿಂದ ನೋಡಿ ಬಸವಾ ಬಸವಾ ಎನ್ನುತ್ತಾ ಸಾವಕಾಶವಾಗಿ ತಲೆ ಬಾಗಿಸಿ ಮೌನವಾದರು.

ಪೂಜ್ಯ ಗುರುಮಹಾಂತ ಸ್ವಾಮಿಗಳು, ಶ್ರೀ ಶಾಂತಣ್ಣ ಸರಗಣಾಚಾರಿ, ಶ್ರೀ ಶ್ರೀಶೈಲ ಬಾಳಿಕಾಯಿ ಸವದಿ, ಶ್ರೀ ಗುರುಬಸವದೇವರು ಪಕ್ಕದ ಕೋಣೆಯಲ್ಲಿ ಪ್ರಸಾದ ಮಾಡಿ ಬರುವವರೆಗೆ ಪೂಜ್ಯರನ್ನು ಮಾತನಾಡಿಸುತ್ತಲೇ ಇರಬೇಕು ಎಂದು ನಮಗೆ ತಿಳಿಸಿದ್ದರು. ಪೂಜ್ಯರ ಜೀವನ-ಸಾಧನೆಯ ಕೆಲವು ಪ್ರಸಂಗಗಳನ್ನು ನೆನಪಿಸುತ್ತಾ, ಹೇಳುತ್ತಿದ್ದೆವು. ಪೂಜ್ಯರು ನಮ್ಮ ಮಾತುಗಳಿಗೆ ಆಗಾಗ ತಲೆದೂಗುತ್ತಾ ಹೂಂ, ಹೌದು ಎಂದು ಅನ್ನುತ್ತಿದ್ದರು.

ಅಂದು ೧೭-೦೫-೨೦೧೮ರ ಸಂಜೆ ೬:೦೦ ಗಂಟೆಗೆ ಬೆಳಗಾವಿಯ ಮಹಾಂತೇಶ ನಗರದ 'ಮಹಾಂತ ಭವನ'ದಲ್ಲಿ ದಾವಣಗೆರೆ ಅಜ್ಜಂಪುರಶೆಟ್ರ ಟ್ರಸ್ಟ್ ಹಾಗೂ ಬಸವಬಳಗದವರು - ಲಿಂಗಾಯತ ಸಂಘಟನೆಗಳ ಸಹಕಾರ ದೊಂದಿಗೆ ೧೦ನೇ ಶರಣತತ್ವ ಕಮ್ಮಟ (ಶಿವಾನುಭವ ಶಿಬಿರ) ಏರ್ಪಡಿಸಿದ್ದಾರೆ. ನಾಲ್ಕು ದಿನ ಜರುಗಲಿದೆ. ಪೂಜ್ಯ ಸಿದ್ಧರಾಮಸ್ವಾಮಿಗಳು, ವಿ. ಸಿದ್ಧರಾಮಣ್ಣ

ಶರಣರು, ಬೆಲ್ದಾಳ ಶರಣರು, ವಾಗ್ದೇವಿ ತಾಯಿ, ಕುಮುದಿನಿ ತಾಯಿ, ಶಿವಾನಂದ ಗುರೂಜಿ, ನಿಜಗುಣಾನಂದ ಸ್ವಾಮಿಗಳು, ಅರವಿಂದ ಜತ್ತಿ, ಬಸವಕಿರಣ, ಹೆಚ್. ಎಂ. ಸ್ವಾಮಿ, ಕೆ. ಮಹಾರುದ್ರಯ್ಯ, ಅಂ. ಹಾ. ಹುಚ್ಚಪ್ಪ ಮೇಷ್ಟ್ರು, ಕಲ್ಯಾಣಮ್ಮ ಲಂಗೋಟಿ, ಜಯಶ್ರೀ ತಾಯಿ, ಭುವನೇಶ್ವರಿ ತಾಯಿ, ದೇವಿಗೆರೆ ವೀರಭದ್ರಪ್ಪ, ಶಂಭು ಹೆಗದ್ಯಾಳ, ಭಾರತಿ ಕೆಂಪಯ್ಯ, ಗಂಗಾಧರ ದೇವರು, ಗಾಯತ್ರಿ ತಾಯಿ, ವಿಶ್ವಾರಾಧ್ಯ ಸತ್ಯಂಪೇಟೆ, ಪಂ. ಮೃತ್ಯುಂಜಯ ಶೆಟ್ಟರ್, ಅಜ್ಜಂಪುರ ಶೆಟ್ರ, ಶಂಭು ಲಿಂಗಪ್ಪ, ಷಡಕ್ಷರಿ, ಓಂಕಾರಪ್ಪ, ಪಿ. ರುದ್ರಪ್ಪ ಶರಣರು, ಡಾ. ಅವಿನಾಶ ಕವಿ ಹಾಗೂ ಬೆಳಗಾವಿಯ ಶರಣ-ಶರಣೆಯರು ಅನುಭಾವ ನೀಡಲಿದ್ದಾರೆ- ಎಂದು ಪೂಜ್ಯರಿಗೆ ಹೇಳುತ್ತಾ ಹೋದೆ.

'ಶಿವಾನುಭವ ಶಿಬಿರ' ಎಂಬ ಶಬ್ದ ಕಿವಿಗೆ ಬಿದ್ದ ಕೂಡಲೇ ಪೂಜ್ಯರು ಒಮ್ಮೆಲೆ ಎಚ್ಚತ್ತು- ಶರಣರೆ, ಶಿವಾನುಭವ ಶಿಬಿರ ಇದೆಯೇ? ನಾನೂ ಅಲ್ಲೇ ಬಂದು ಕೂಡುತ್ತಿದ್ದೆ, ಏನು ಮಾಡೋದು? ಆರೋಗ್ಯ ಸರಿ ಇಲ್ಲ' ಎಂದರು.

ಆಗ ನಾನು - 'ಅಪ್ಪಾ ಅವರೆ, ತಾವು ೪೨ ವರುಷ ಶಿವಾನುಭವ ಶಿಬಿರ ನಡೆಸುತ್ತಾ ಬಂದಿದ್ದೀರಿ. ತಮ್ಮ ದೇಹ ಇಲ್ಲಿದ್ದರೂ, ತಮ್ಮ ಮನಸ್ಸು ಶಿಬಿರ ದಲ್ಲಿಯೇ ಇರುತ್ತದೆ, ತಮ್ಮ ಆಶೀರ್ವಾದ ಇರಲಿ' ಎಂದು ನುಡಿದೆ.

ಪೂಜ್ಯರು ಮತ್ತೆ ಮೌನವಾದರು. ಹೀಗೆಯೇ ಎರಡು ತಾಸು ಚರ್ಚೆ ನಡೆಯಿತು. ಪೂಜ್ಯ ಮಹಾಂತ ಅಪ್ಪಗಳು ತುಂಬಾ ಬಳಲಿದಂತೆ ಕಾಣುತ್ತಿದ್ದರು. ಶ್ರೀ ಗುರುಮಹಾಂತ ಸ್ವಾಮಿಗಳು, ಶಾಂತಣ್ಣ ಸರಗಣಾಚಾರಿ, ಶ್ರೀಶೈಲ ಬಾಳಿಕಾಯಿ ಇವರು ಪೂಜ್ಯರನ್ನು ಕೂಸಿನಂತೆ ಸಾವಕಾಶವಾಗಿ ಎತ್ತಿ ಕಾಟಿನ ಮೇಲೆ ಮಲಗಿಸಿದರು. ಬಹುಶಃ ಇದುವೇ ನಮ್ಮ ಅಂತಿಮ ದರ್ಶನ-ಸಂದರ್ಶನ ವಾಗುತ್ತದೆ ಎಂದು ಅನಿಸಿರಲಿಲ್ಲ.

ನಾಲ್ಕು ದಿನ ಶಿಬಿರದಲ್ಲಿ ಭಾಗವಹಿಸಿದ್ದೆವು. ದಿನಾಂಕ ೧೮-೦೫-೨೦೧೮ ರಂದು ಶಿಬಿರದಲ್ಲಿ ನಮ್ಮ ಪಾಠ-ಪ್ರವಚನಗಳಿದ್ದುದರಿಂದ ಅಂದು ಆಸ್ಪತ್ರೆಗೆ ಹೋಗಲಾಗಲಿಲ್ಲ. ದಿನಾಂಕ ೧೯-೦೫-೨೦೧೮ ರಂದು ಬೆಳಿಗ್ಗೆ ಶಿಬಿರದಲ್ಲಿ ಸಾಮೂಹಿಕ ಇಷ್ಟಲಿಂಗಪೂಜೆ ಪೂರೈಸಿ, ೧೦:೦೦ ಗಂಟೆಗೆ ಪೂಜ್ಯರ ದರ್ಶನಕ್ಕೆ ವಿ. ಸಿದ್ಧರಾಮಣ್ಣ ಶರಣರು ಹಾಗೂ ನಾವು ಹೋಗಲು ನಿರ್ಧರಿಸಿದ್ದೆವು. ಅಂದು ೯:೦೦ ಗಂಟೆಗೆ ಫೋನ್ ಬಂದಿತು- 'ಪೂಜ್ಯ ಮಹಾಂತಪ್ಪಗಳು ಬಸವ ಮಹಾಬಯಲಿನಲಿ ಬಯಲಾದರು' ಈ ಸುದ್ಧಿ ತಿಳಿದಾಗ, 'ಅಪ್ಪಾ ಬಯಲಾದಿರಾ' ಎಂದು ೯೪ ವರುಷಗಳ ವಿ. ಸಿದ್ಧರಾಮಣ್ಣ ಶರಣರು ದುಃಖ ತಡೆಯಲಾಗದೇ ಬಿಕ್ಕುತ್ತಾ ಕಣ್ಣೀರು ಸುರಿಸತೊಡಗಿದರು. ಅವರೊಂದಿಗಿದ್ದ ನಮ್ಮೆಲ್ಲರ ಕಂಗಳಲ್ಲೂ ಧಾರಾಕಾರ ಕಣ್ಣೀರು ಹರಿದವು. ಪರಸ್ಪರ ಸಂತೈಸಿಕೊಂಡೆವು. ಬೆಳಗಾವಿಯಲ್ಲಿಯೇ

ಪೊಲೀಸ್ ವರಿಷ್ಠಾಧಿಕಾರಿಯಾಗಿರುವ ಚಿ॥ ಚೆನ್ನಬಸವಣ್ಣನಿಗೆ ಫೋನ್ ಮಾಡಿ, ಮಹಾಂತ ಭವನಕ್ಕೆ ಬರಲು ತಿಳಿಸಿದೆ. ಅವರ ಕಾರಿನಲ್ಲಿ ಪೂಜ್ಯ ವಿ. ಸಿದ್ಧರಾಮಣ್ಣ ಶರಣರು, ನಾನು (ಸಿದ್ಧಣ್ಣ ಲಂಗೋಟಿ) ಆಸ್ಪತ್ರೆಗೆ ಹೋದೆವು. ಪೂಜ್ಯರ ಲಿಂಗ ಶರೀರದ ದರ್ಶನಕ್ಕೆ ಆಗಲೇ ಪೂಜ್ಯ ಸಿದ್ದೇಶ್ವರ ಸ್ವಾಮಿಗಳು, ಬೆಳಗಾವಿ-ನಾಗನೂರ ಸಿದ್ಧರಾಮ ಸ್ವಾಮಿಗಳು, ಮುಂತಾದ ಶ್ರೀಗಳು ಆಗಮಿಸಿದ್ದರು. ಪೂಜ್ಯ ನಾಗನೂರ ಶ್ರೀಗಳವರಿಗೆ- ಪೂಜ್ಯ ಮಹಾಂತಪ್ಪಗಳ 'ಲಿಂಗದೇಹ'ವನ್ನು ಆಸ್ಪತ್ರೆಯಿಂದ ಮಹಾಂತ ಭವನಕ್ಕೆ ಶಿಬಿರಾರ್ಥಿಗಳ ಹಾಗೂ ಶರಣ-ಶರಣೆಯರ ದರ್ಶನಕ್ಕೆ ತರಲು ವಿನಂತಿಸಿ, ನಾವು ಶಿಬಿರದ ಸ್ಥಳಕ್ಕೆ ಬಂದೆವು.

**ಅಂತಿಮ ಯಾತ್ರೆ - ಕ್ರಿಯಾ ಸಮಾಧಿ :**

ಕೆ.ಎಲ್.ಇ. ಆಸ್ಪತ್ರೆಯ ವೈದ್ಯರು ಪೂಜ್ಯರ 'ಲಿಂಗ ದೇಹ' ಕೆಡದಂತೆ ಪೂರ್ವಭಾವಿ ಔಷಧೋಪಚಾರ ಮಾಡಿ, ವಾಹನದಲ್ಲಿ ಮಲಗಿಸಿ ಮಧ್ಯಾಹ್ನ ೧೨:೦೦ ಗಂಟೆಗೆ ಬೀಳ್ಕೊಟ್ಟರು.

ಪೂಜ್ಯ ಮಹಾಂತ ಶಿವಯೋಗಿಗಳವರ 'ಲಿಂಗದೇಹದ ವಾಹನ' ದೊಂದಿಗೆ ಪೂಜ್ಯ ಶ್ರೀ ನಿಜಗುಣಾನಂದ ಸ್ವಾಮಿಗಳು, ನಾಗನೂರು ಸಿದ್ಧರಾಮ ಸ್ವಾಮಿಗಳು ಇನ್ನೂ ಅನೇಕ ಪೂಜ್ಯರು ಇದ್ದರು. ಗುರುಮಹಾಂತ ಸ್ವಾಮಿಗಳವರ ಮಾತೃಹೃದಯದ ದುಃಖದ ಕಟ್ಟೆಯೊಡೆದಿತ್ತು. ಕರು (ಗುರು)ವನ್ನು ಕಳೆದುಕೊಂಡ ಆಕಳಂತೆ (ಶಿಷ್ಯ) ಗುರುಮಹಾಂತರು ರೋಧಿಸುತ್ತಿದ್ದರು.

ಬೆಳಗಾವಿ ಆಸ್ಪತ್ರೆಯಿಂದ ದಿ. ೧೯-೦೫-೨೦೧೮ ರಂದು ಮಧ್ಯಾಹ್ನ ಹೊರಟು, ಅಲ್ಲಿಯ ಶಿವಬಸವನಗರದ ರುದ್ರಾಕ್ಷಿಮಠಕ್ಕೆ, ಅಲ್ಲಿಂದ ಮಹಾಂತೇಶ ನಗರದ ಮಹಾಂತ ಭವನಕ್ಕೆ, ಅಲ್ಲಿ ಸಾವಿರಾರು ಭಕ್ತರು ದರ್ಶನ ಪಡೆದರು. ಅಲ್ಲಿಂದ ಅಥಣಿ ಗಚ್ಚಿನಮಠ, ಸವದಿ ವಿರಕ್ತಮಠ, ಜಮಖಂಡಿ, ಮುಧೋಳ, ಲೋಕಾಪೂರ, ಬಾಗಲಕೋಟೆ ಬ.ವಿ.ವ. ಸಂಘ, ಚಿತ್ತರಗಿ ಸಂಸ್ಥಾನಮಠ, ಹಿರೇಬಾದವಾಡಗಿ ಶಾಖಾಮಠ, ಹುನಗುಂದ ಶಾಖಾಮಠಗಳಲ್ಲಿ ಭಕ್ತರ ದರ್ಶನ ಮಾಡಿಸಿ ದಿ. ೨೦-೦೫-೨೦೧೮ ರ ಬೆಳಗಿನ ೪:೩೦ ಗಂಟೆಗೆ ಇಳಕಲ್ಲ ಸಂಸ್ಥಾನ ಮಠಕ್ಕೆ ಆಗಮನ. ಸಹಸ್ರಾರು ಭಕ್ತರು ಗುರುವಿನ ಲಿಂಗದೇಹದ ದರ್ಶನ ಪಡೆದರು.

ಅಂದು ಬೆಳಿಗ್ಗೆ ಶ್ರೀಮಠದಲ್ಲಿ ಶ್ರೀಗಳವರ ಲಿಂಗದೇಹಕ್ಕೆ ಸ್ನಾನ ಪೂಜೆ ಮಾಡಿ ದರ್ಶನಕ್ಕೆ ಅನುಕೂಲ ಕಲ್ಪಿಸಲಾಯಿತು. ನಾಡಿನೆಲ್ಲೆಡೆಯಿಂದ ಜನಸಾಗರ ಹರಿದು ಬರತೊಡಗಿತು. ಇಳಕಲ್ಲ ಪಟ್ಟಣದ ರಸ್ತೆಗಳಲ್ಲಿ ವಾಹನ ದಟ್ಟಣೆ, ಜನಸಂದಣಿ ಕಂಡು, ಜಿಲ್ಲಾಡಳಿತ ಹಾಗೂ ಶ್ರೀಮಠದ ಹಿರಿಯಭಕ್ತರು ಚರ್ಚಿಸಿ, ಪೂಜ್ಯರ ಲಿಂಗಶರೀರವನ್ನು ಮಧ್ಯಾಹ್ನ ಇಳಕಲ್ಲ ಹೊರವಲಯದಲ್ಲಿರುವ ಶ್ರೀ ವಿಜಯ ಮಹಾಂತೇಶ ಕಾಲೇಜಿನ ಶ್ರೀ ವೀರಮಣಿ ಕ್ರೀಡಾಂಗಣಕ್ಕೆ ತಂದು, ಅಲ್ಲಿ ಭವ್ಯ ವೇದಿಕೆ ನಿರ್ಮಿಸಿ ದರ್ಶನಕ್ಕೆ ಅವಕಾಶ ಮಾಡಲಾಯಿತು.

ದಿನಾಂಕ ೨೦-೦೫-೨೦೧೮ ರಂದು ಹಗಲು-ರಾತ್ರಿ ಲಕ್ಷಾಂತರ ಜನ ಭಕ್ತರು, ಮಠಾಧೀಶರು, ರಾಜಕೀಯ ನೇತಾರರು, ಶಾಸಕರು, ವಿದ್ಯಾರ್ಥಿ ಸಮುದಾಯ ದರ್ಶನ ಪಡೆದರು. ಅನೇಕ ಭಜನಾ ಮಂಡಳಿಗಳು ಸಂಗೀತಗಾರರು ನಿರಂತರ ವಚನ ಭಜನೆ, ಭಕ್ತಿ ಗೀತೆ ಹಾಡಿದರು.

ದಿನಾಂಕ ೨೧-೦೫-೨೦೧೮ ಸೋಮವಾರ ಬೆಳಿಗ್ಗೆ ಕ್ರೀಡಾಂಗಣದಿಂದ ಪೂಜ್ಯರ 'ಲಿಂಗಶರೀರದ ಉತ್ಸವ'ವು ಇಳಕಲ್ಲ ನಗರದ ಪ್ರಮುಖ ಬೀದಿಗಳಲ್ಲಿ ಸಂಚರಿಸಿ, ಶ್ರೀ ವಿಜಯಮಹಾಂತರ ತಪೋಭೂಮಿ ತಲುಪಿತು.

ಅಂದು ಮಧ್ಯಾಹ್ನ ಕರ್ನಾಟಕದ ಹಂಗಾಮಿ ಮುಖ್ಯಮಂತ್ರಿಗಳಾಗಿದ್ದ ಶ್ರೀ ಬಿ. ಎಸ್. ಯಡಿಯೂರಪ್ಪನವರು ಆಗಮಿಸಿ, ಸರ್ಕಾರಿ ಗೌರವದೊಂದಿಗೆ ಪೂಜ್ಯರ ಅಂತಿಮ ದರ್ಶನ ಪಡೆದು, ಗೌರವ ಅರ್ಪಿಸಿದರು. ಮೈಸೂರು-ಸುತ್ತೂರು, ಗದಗ, ಚಿತ್ರದುರ್ಗ, ಕೂಡಲಸಂಗಮ, ಶ್ರೀಶೈಲ, ಕಲಬುರ್ಗಿ, ಬೆಳಗಾವಿ, ಧಾರವಾಡ, ನಿಡಸೋಸಿ, ಶಿರಹಟ್ಟಿ, ಹುಬ್ಬಳ್ಳಿ, ಬಾಗಲಕೋಟೆ, ಲಿಂಗಸಗೂರು, ಸಿದ್ಧಯ್ಯನಕೋಟೆ, ಶಿರೂರ, ಭಾಲ್ಕಿ, ಬೀದರ, ಬೆಂಗಳೂರು, ನಾಗನೂರ ನಂದವಾಡಗಿ, ನಿಡಗುಂದಿ, ಆಲಮೇಲ, ಸಿಂದಗಿ, ಚಿಂಚಣಿ ಮುಂತಾದ ನೂರಾರು ಮಠಗಳ ಪೂಜ್ಯರು ದಯಮಾಡಿಸಿ, ಅಂತಿಮ ದರ್ಶನ ಪಡೆದು, ಪೂಜ್ಯರ ಸಾಧನೆ ಹಾಡಿ-ಹೊಗಳಿದರು. ಹುನಗುಂದ, ಬಾಗಲಕೋಟೆ, ಹುಬ್ಬಳ್ಳಿ, ವಿಜಯಪುರ, ರಾಯಚೂರ, ಕಲಬುರ್ಗಿ, ಬೀದರ, ಧಾರವಾಡ, ಬೆಳಗಾವಿ, ರಾಯಚೂರ, ಮುದಗಲ್ಲ, ಬಳ್ಳಾರಿ ಜಿಲ್ಲೆಗಳ ಶಾಸಕರುಗಳು ಆಗಮಿಸಿ ದರ್ಶನ ಪಡೆದರು.

ಬಸವಗುರು ವಚನ ಪಠಣ-ಪಾರಾಯಣದೊಂದಿಗೆ ಬಸವಗುರು ಮಂತ್ರ ಪೂಜ್ಯರ ಲಿಂಗಶರೀರದ ಅಂತಿಮ ಕ್ರಿಯಾ ಸಮಾಧಿ ನೆರವೇರಿಸಿದರು. ಲಕ್ಷಾಂತರ ಭಕ್ತರು ಅಂತಿಮ ದರ್ಶನ ಪಡೆದು ಶ್ರೀಮಠದಲ್ಲಿ ಪ್ರಸಾದ ಸ್ವೀಕರಿಸಿ, ಪೂಜ್ಯರ ಗುಣಗಾನ ಮಾಡುತ್ತಾ, ನೆನೆಯುತ್ತಾ ತಮ್ಮ ತಮ್ಮ ನೆಲೆಗಳಿಗೆ ಮರಳಿದರು.

೧೨ನೇ ಶತಮಾನವು 'ಬಸವಯುಗ' ಜ್ಞಾಪಿಸುವಂತೆ ೨೧ನೇ ಶತಮಾನವು 'ಮಹಾಂತ ಯುಗ' ವೆಂದು ಖ್ಯಾತಿ ಪಡೆಯಿತು. ಪೂಜ್ಯ ಮಹಾಂತ ಶಿವಯೋಗಿಗಳ ಬಸವ ಚೇತನಕ್ಕೆ ಭಕ್ತಿಯ ಶರಣು ಶರಣಾರ್ಥಿಗಳು.

**ನಿಂದಿಸುವನೊಬ್ಬ, ಸ್ತುತಿಸುವನೊಬ್ಬ**
**ಇವರಿಬ್ಬರೂ ನಮ್ಮ ಶಿವಯೋಗಿಯ ಪರಮ ಬಂಧುಗಳಯ್ಯಾ**
**ನಿಂದಿಸುವವ ಪಾಪವ ಕೊಂಬ,**
**ಸ್ತುತಿಸುವವ ಪುಣ್ಯವ ಕೊಂಬ**
**ಕೂಡಲಸಂಗಮದೇವಾ, ನಿಮ್ಮ ಶರಣರು ನಿತ್ಯಮುಕ್ತರು.**
**-ವಿಶ್ವಗುರು ಬಸವಣ್ಣನವರು**

## ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಕೃತಿಗಳು

| | | |
|---|---|---|
| ೧. | ಅಲ್ಲಮಪ್ರಭುದೇವರ ಜೀವನ ಸಂದೇಶ | ೧೯೭೯ |
| ೨. | ಅಕ್ಕಮಹಾದೇವಿಯ ಜೀವನ ದರ್ಶನ | ೧೯೭೯ |
| ೩. | ಲಿಂಗಾಯತ ಧರ್ಮ ಸಮಾಜ ತತ್ವಜ್ಞಾನ | ೧೯೭೯ |
| ೪. | ಲಿಂಗಾಯತ ಧರ್ಮದ ಮೂಲತತ್ವಗಳು | ೧೯೭೯ |
| ೫. | ಶಿವಯೋಗಿಣಿ ಅಕ್ಕನಾಗಮ್ಮ (ಸಂಪಾದಿತ) | ೧೯೭೯ |
| ೬. | ಗಣನಾಯಕ ಮಡಿವಾಳ ಮಾಚಿದೇವರು | ೧೯೭೯ |
| ೭. | ಮರಣವೇ ಮಹಾನವಮಿ | ೧೯೮೦ |
| ೮. | ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರು | ೧೯೮೦ |
| ೯. | ಬಸವಬೆಳಗು (ಸಂಪಾದಿತ) | ೧೯೮೦ |
| ೧೦. | ಪ್ರಭುವಿನ ವಾಣಿಯಲ್ಲಿ ಬಸವಣ್ಣನವರು | ೧೯೮೦ |
| ೧೧. | ವಚನ ಸಂಶೋಧನ ಪಿತಾಮಹ ಫ.ಗು. ಹಳಕಟ್ಟಿಯವರು | ೧೯೮೧ |
| ೧೨. | ಬಸವಣ್ಣನವರ ಬಯ್ಗುಳಗಳು | ೧೯೮೧ |
| ೧೩. | ಅಕ್ಕ ಕಂಡ ಅಣ್ಣ | ೧೯೮೧ |
| ೧೪. | ಅಂಬಿಗರ ಚೌಡಯ್ಯ | ೧೯೮೧ |
| ೧೫. | ಶರಣರ ಶಿವರಾತ್ರಿ | ೧೯೮೨ |
| ೧೬. | ಸ್ವಾಮಿ ವಿವೇಕಾನಂದರ ದೇಶಭಕ್ತಿ ಕಲ್ಪನೆ | ೧೯೮೨ |
| ೧೭. | ಬಸವಾದಿ ಶ[illegible] ವಚನಾಮೃತ (ಸಂಪಾದಿತ) | ೧೯೮೩ |
| ೧೮. | ವಿಭೂತಿ ನಿರ್ಮಾಣ ವಿಧಾನ | ೧೯೮೪ |
| ೧೯. | ಬಾಚಿಕಾಯಕದ ಬಸವಪ್ಪ ಕಾಳವ್ವೆ | ೧೯೮೪ |
| ೨೦. | ಶರಣರು ಹಾಗೂ ಮೂಢನಂಬಿಕೆಗಳು | ೧೯೮೪ |
| ೨೧. | ಇಷ್ಟಲಿಂಗ ನಿರ್ಮಾಣ ವಿಧಾನ | ೧೯೮೫ |
| ೨೨. | ಹಡಪದ ಅಪ್ಪಣ್ಣ ಲಿಂಗಮ್ಮ | ೧೯೮೫ |
| ೨೩. | ಶ್ರೀ ಗುರುಸಿದ್ಧ ಪ್ರಭುದೇವರು | ೧೯೮೫ |
| ೨೪. | ಇಷ್ಟಲಿಂಗ ಪೂಜಾ ವಿಧಾನ | ೧೯೮೫ |
| ೨೫. | ಫಕ್ಕೀರಪ್ಪ ಮುರಗೋಡ ಮಾಸ್ತರು | ೧೯೮೫ |
| ೨೬. | ಶಿವಶರಣರ ಕ್ರಾಂತಿ (ಕ.ವಿ.ವಿ. ಪ್ರಕಟಣೆ) | ೧೯೮೬ |
| ೨೭. | ವಿಶ್ವಗುರು ಬಸವಣ್ಣನವರ ವಚನಗಳು (ಸಂಪಾದಿತ) | ೧೯೮೬ |
| ೨೮. | ಕರ್ನಾಟಕ ಗಾಂಧಿ ಹರ್ಡೇಕರ ಮಂಜಪ್ಪನವರು | ೧೯೮೬ |
| ೨೯. | ಯುಗ ಪುರುಷ ಚೆನ್ನಬಸವ ಪಟ್ಟಾಧ್ಯಕ್ಷರು | ೧೯೮೭ |
| ೩೦. | ಬಸವದರ್ಶನ (ಸಂಪಾದಿತ) | ೧೯೮೭ |
| ೩೧. | ವಚನಸಾಹಿತ್ಯ : ತಾತ್ವಿಕ ವಿವೇಚನೆ | ೧೯೮೭ |
| ೩೨. | ವಿಶ್ವವಿಖ್ಯಾತ ತತ್ವಜ್ಞಾನಿ ಡಾ. ರಾಧಾಕೃಷ್ಣನ್‌ರು | ೧೯೮೮ |
| ೩೩. | ಧರ್ಮಗುರು ಜಗಜ್ಯೋತಿ ಬಸವಣ್ಣನವರು | ೧೯೮೮ |
| ೩೪. | ಅಲ್ಲಮ ಪ್ರಭುದೇವರ ವಚನಗಳು (ಸಂಪಾದಿತ) | ೧೯೮೯ |
| ೩೫. | ಬಸವಣ್ಣನವರು ಮತ್ತು ಜಾಗತಿಕ ಶಾಂತಿ | ೧೯೮೯ |
| ೩೬. | ಬಸವಭಕ್ತ ಘನಮಠ ಶಿವಯೋಗಿಗಳು | ೧೯೮೯ |
| ೩೭. | ಚೆನ್ನಬಸವಣ್ಣನವರ ವಚನಗಳು (ಸಂಪಾದಿತ) | ೧೯೮೯ |
| ೩೮. | ಬಸವಭಕ್ತ ಅಥಣಿ ಶಿವಯೋಗಿಗಳು | ೧೯೮೯ |
| ೩೯. | ದೇವದಾಸಿ ಪದ್ಧತಿ ವಿಮೋಚನೆ ಹಾಗೂ ಬಸವಣ್ಣನವರು | ೧೯೮೯ |



ಶರಣ ಸಾಹಿತಿ

# ಪ್ರೊ. ಸಿದ್ಧಣ್ಣ ಲಂಗೋಟಿ

'ಜಗಜ್ಯೋತಿ ಬಸವೇಶ್ವರ' ವಚನಾಂಕಿತದಲ್ಲಿ ವಚನಗಳನ್ನು ರಚಿಸಿ, ಆಧುನಿಕ ವಚನಕಾರರರಲ್ಲಿ ಒಬ್ಬರಾಗಿರುವ, ಬಸವತತ್ವನಿಷ್ಠ **ಶರಣ ಪ್ರೊ. ಸಿದ್ಧಣ್ಣ ಲಂಗೋಟಿ,** ಚಾಂದಕವಠೆ ಗ್ರಾಮದ ಕೃಷಿ ಕುಟುಂಬದಲ್ಲಿ ೧೯೫೦ ರಲ್ಲಿ ಜನಿಸಿದರು.

ವಿಜ್ಞಾನ, ತತ್ವಜ್ಞಾನ, ಕಾನೂನು, ಸಾಹಿತ್ಯ ಯೋಗಗಳಲ್ಲಿ ಸ್ನಾತಕ ಶಿಕ್ಷಣ ಪಡೆದು, ಬಸವ ತತ್ವ ಪ್ರಸಾರದ ಮಹಾಮಣಿಹ ಪೂರೈಸುತ್ತಿದ್ದಾರೆ.

ಸುಜ್ಞಾನ-ಸತ್ಕ್ರಿಯೆ-ಸ್ವಾನುಭಾವದ ಶರಣ ಜೀವಿಗಳಾಗಿರುವ ಸಿದ್ಧಣ್ಣನವರು ಬಸವತತ್ವ ಪ್ರಸಾರ ಸಂಸ್ಥೆಯ ಸ್ಥಾಪಕ ಪ್ರಧಾನಕಾರ್ಯದರ್ಶಿಯಾಗಿ, ಶಿವಾನುಭವ ಪತ್ರಿಕೆಯನ್ನು ಮರಳಿ ಪ್ರಾರಂಭಿಸಿ ಸಂಪಾದಕರಾಗಿ ಮಹತ್ವದ ಪಾತ್ರವಹಿಸಿದರು. ಶರಣ ಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾಗಿ ಕಳೆದ ೪೦ ವರುಷಗಳಿಂದ ಶಿವಾನುಭವ ಶಿಬಿರಗಳನ್ನು ಸಂಘಟಿಸುತ್ತಾ ಬಂದಿದ್ದಾರೆ. ೧೯೯೦ರಲ್ಲಿ ಇಳಕಲ್ಲ ಹಿರಿಯ ಪೂಜ್ಯರೊಂದಿಗೆ ಇಂಗ್ಲೆಂಡ ಪ್ರವಾಸ ಮಾಡಿ 'ಬಸವ ಇಂಟರ್‌ನ್ಯಾಷನಲ್ ಫೌಂಡೇಶನ್ ಲಂಡನ್' ಸ್ಥಾಪಕ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ೨೦೦೦ ಇಸ್ವಿಯಲ್ಲಿ ಇಂಗ್ಲೆಂಡ - ಅಮೇರಿಕಾ -ಫ್ರಾನ್ಸ್ -ಕೆನಡಾ -ಜರ್ಮನ್ -ಹಾಲಂಡ-ಇಟಲಿ - ವೆಟಿಕನ್- ಸಿಂಗಾಪೂರ- ಆಸ್ಟ್ರೀಯಾ-ಅರಬ್ ಮುಂತಾದ ೧೮ ರಾಷ್ಟ್ರಗಳಿಗೆ ಹೋಗಿ ಬಸವತತ್ವ ಪ್ರಸಾರಗೈದು ಬಂದಿದ್ದಾರೆ.

ಇಳಕಲ್ಲ ಶ್ರೀಮಠದ 'ಬಸವಬೆಳಗು' ಪತ್ರಿಕೆಯ ಗೌ. ಸಂಪಾದಕರಾಗಿ ೩೨ ವರುಷಗಳಿಂದ ಸೇವೆ, ಬಸವಾದಿ ಶರಣರ ಧರ್ಮ, ಸಾಹಿತ್ಯ, ತತ್ವಜ್ಞಾನ, ಶಿಕ್ಷಣ, ಯೋಗ ಕುರಿತು ೭೫ಕ್ಕೂ ಮಿಕ್ಕಿ ಗ್ರಂಥಗಳ ರಚನೆ, ಸಂಪಾದನೆ ಮಾಡಿದ್ದಾರೆ. ಶರಣ ಸಿದ್ಧಾಂತ ವಿದ್ಯಾಪೀಠ, ಮಹಾಂತ ಜೋಳಿಗೆ ಕಾರ್ಯಕ್ರಮಗಳ ಸಂಚಾಲಕ, ಸಂಯೋಜಕರಾಗಿ ಪೂಜ್ಯ ಮಹಾಂತ ಶಿವಯೋಗಿಗಳ ಕೃಪೆಗೆ ಪಾತ್ರರಾಗಿದ್ದಾರೆ.

**- ಶ್ರೀ ಮ.ನಿ.ಪ್ರ. ಗುರುಮಹಾಂತಸ್ವಾಮಿಗಳು**
ಚಿತ್ತರಗಿ ಸಂಸ್ಥಾನಮಠ, ಇಳಕಲ್
ಸಂಗನಬಸವ ಮಠ ಸವದಿ (ಅಥಣಿ)